# ಮುನ್ನುಡಿ

ಈ **'ಸೋಲಿಗ ಸಿರಿ'** ಹೊತ್ತಿಗೆಯು ಸೋಲಿಗ ಸಂಸ್ಕೃತಿಯ ಕಿರು ನೋಟ ನೀಡುವ ಆಶಯದಿಂದ ರಚಿತವಾಗಿದೆ. ವನಸಿರಿ ಸುಗಂಧದ ಹಸಿರು ಕಾನನ ಬಿಳಿಗಿರಿರಂಗನ ಬೆಟ್ಟದಲ್ಲಿರುವ ನಮ್ಮ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದಲ್ಲಿ ಗೌರವ ಸಂಯೋಜಕರಾಗಿ, ಸಮಗ್ರ ಗಿರಿಜನ ಅಭಿವೃದ್ಧಿಯಲ್ಲಿ ಎರಡು ದಶಕಗಳಿಗೂ ಮೀರಿ ಪಾಲ್ಗೊಂಡು ಶ್ರಮಿಸಿದ ಶ್ರೀ ಸೋಮಸುಂದರಂರವರು ಈ ಕಿರುಹೊತ್ತಿಗೆಯನ್ನು ರಚಿಸಿದ್ದಾರೆ. ಸಮಾಜ ಕಾರ್ಯದಲ್ಲಿ ಅವರ ಅನುಭವ ಮತ್ತು ಜನರ ನಡುವೆ ಅವರು ಮಾಡಿದ ಕಾರ್ಯದಿಂದಾಗಿ ಅವರು ಸೋಲಿಗ ಹಿರಿಯರು, ಕಿರಿಯರು ಎಲ್ಲರ ನಿಕಟ ಸಂಪರ್ಕಕ್ಕೆ ಬಂದುದಲ್ಲದೆ ಸಮುದಾಯದ ಆದರಾಭಿಮಾನಗಳನ್ನು ಗಳಿಸಿದ್ದಾರೆ. ಈ ಹಿನ್ನೆಲೆಯಲ್ಲಿ ರಚಿತವಾಗಿರುವುದರಿಂದಲೇ ಈ ಪುಸ್ತಕದಲ್ಲಿ ಸೋಲಿಗ ಸಂಸ್ಕೃತಿಯು ಚೆನ್ನಾಗಿ ಪ್ರತಿಬಿಂಬಿತವಾಗಿ ನಿರೂಪಣೆಯೂ ಮನಮುಟ್ಟುವಂತಿದೆ.

ಸೋಲಿಗ ಜನಜೀವನ, ಜಾನಪದ ಸೊಬಗು, ಪಾರಂಪರಿಕ ಜ್ಞಾನ ಮತ್ತು ಅವರ ಸರಳ ಸಂಸ್ಕೃತಿಯಲ್ಲಿ ಹೊಮ್ಮಿರುವ ವಿಶ್ವಶಾಂತಿ ಮೂಲಗಳು ಈ ಪುಟಗಳಲ್ಲಿ ಸುಂದರವಾಗಿ ಮೂಡಿಬಂದಿವೆ. ನೇರ ಸರಳ ಸ್ವಾರಸ್ಯಕರ ನಿರೂಪಣೆಯು ಓದುಗರನ್ನು ಸುಲಲಿತವಾಗಿ ಮುಂದೆ ಮುಂದೆ ಕರೆದೊಯ್ಯುತ್ತದೆ.

ಈ ಸುಂದರ ಕೃತಿಯು ಎಲ್ಲರಿಗೂ ಉಪಯುಕ್ತವಾಗಲೆಂದು ಹಾರೈಸುತ್ತೇನೆ.

ಬೆಂಗಳೂರು
15-8-2009

**- ಡಾ॥ ಎಚ್. ಸುದರ್ಶನ್**

# ಅರಿಕೆ

ಒಮ್ಮೆ ಹಿರಿಯ ಅರಣ್ಯ ಸಂರಕ್ಷಣಾಧಿಕಾರಿಯೊಬ್ಬರು ಬಿಳಿಗಿರಿರಂಗನ ಬೆಟ್ಟಕ್ಕೆ ಬಂದರು. ಕಾಡು ಬೆಳೆಸುವುದರ ಬಗ್ಗೆ ಅವರಿಗೆ ವಿಶೇಷ ಆಸಕ್ತಿಯಿತ್ತು. ಅಂದು ಅದೇ ಸಂದರ್ಭದಲ್ಲಿ ಸೋಲಿಗ ಯಜಮಾನರೊಬ್ಬರು ಅವರಿದ್ದ ಸ್ಥಳಕ್ಕೆ ಬಂದರು. ಅವರನ್ನು ನೋಡಿದ ಸಂರಕ್ಷಣಾಧಿಕಾರಿಯವರಿಗೆ ಒಂದು ವಿಚಾರ ಮಿಂಚಿನಂತೆ ಹೊಳೆಯಿತು. ಕಾಡು ಬೆಳೆಸುವುದರ ಬಗ್ಗೆ ಆದಿವಾಸಿ ಜ್ಞಾನ ಅಪರಿಮಿತ. ಆದ್ದರಿಂದ ಅವರನ್ನು ಕೇಳಿ ತಿಳಿಯಬೇಕು ಎಂದು ಯೋಚಿಸಿದರು. ಕನ್ನಡ ಬರುತ್ತಿರಲಿಲ್ಲವಾದ್ದರಿಂದ ಹತ್ತಿರ ಇದ್ದ ಪ್ರೊ. ಜಯದೇವರವರನ್ನು ಕರೆದು ಸೋಲಿಗ ಯಜಮಾನರಿಗೆ ಕಾಡು ಬೆಳೆಸುವುದು ಹೇಗೆ ಎಂಬುದಾಗಿ ಕೇಳಲು ಹೇಳಿದರು. ಅವರು ಅದೇ ರೀತಿ ಕೇಳಿದಾಗ ಸೋಲಿಗ ಯಜಮಾನರು ಒಂದು ಕ್ಷಣವೂ ಚಿಂತಿಸದೆ "ಅಯ್ಯೋ ಸ್ವಾಮಿ! ಕಾಡನ್ನು ಯಾರಾದರೂ ಬೆಳೆಸ್ತಾರಾ? ಮಳೆ ಸುರಿದು ಮರಕಡೀದೆ ಇದ್ರೆ ಕಾಡು ತಾನಾಗಿಯೇ ಬೆಳೆಯುತ್ತೆ" ಎಂದು ಉತ್ತರವಿತ್ತರು. ಇದು ಪ್ರಕೃತಿ ಹಿನ್ನೆಲೆಯಲ್ಲಿ ಸೈದ್ಧಾಂತಿಕವಾಗಿ ಅತ್ಯಂತ ಸಮಂಜಸ ಉತ್ತರವಾಗಿದೆ. ಆದರೆ ಆಧುನಿಕ ಮಾನವ ನಿರ್ಮಿತ ಬದಲಾದ ಸಂದರ್ಭಗಳಿಂದಾಗಿ ಕಾಡು ಬೆಳೆಸುವ ಆವಶ್ಯಕತೆ ಉಂಟಾಗಿದೆ.

ಪ್ರಕೃತಿಯ ಮಡಿಲಲ್ಲಿ ಬೆಳೆಯುವ ಆದಿವಾಸಿ ಜನಾಂಗಗಳಿಗೆ ಈ ಪಾರಂಪರಿಕ ಜ್ಞಾನವೂ ಸಹಜವಾಗಿಯೇ ಬಂದಿರುತ್ತದೆ. ಹಾಗೆಯೇ ಅವರ ಸರಳ ಮತ್ತು ಹಂಚಿ ತಿನ್ನುವ ಜೀವನ, ಕೂಡಿಡುವುದರಲ್ಲಿ ನಿರಾಸಕ್ತಿ ಮತ್ತು ಅವರದೇ ಆದ ಜಾಣ್ಮೆಯ ಪದ್ಧತಿ ನೆಲಗಟ್ಟುಗಳು, ಇವಕ್ಕೆ ಇಂಬಾಗಿ ಮೌಖಿಕ ಪರಂಪರೆಯ ಜಾನಪದ ಇವೆಲ್ಲವೂ ಆಧುನಿಕ ಮಾನವನು ತಾನು



ಮರೆತಿರುವ ಪ್ರಕೃತಿಯೆಡೆಗೆ ಹಿಂದಿರುಗಬೇಕು ಎಂದು ಅವ್ಯಕ್ತ ದನಿ ಮೂಡಿಸುವಂತೆ ಕೇಳಿಬರುತ್ತದೆ. ಇಂತಹದೊಂದು ಸಮುದಾಯವೆಂದರೆ ಸೋಲಿಗ ಜನಾಂಗ.

ಸೋಲಿಗ ಸಂಸ್ಕೃತಿಯ ಕಿರುನೋಟ ನೀಡುವ ಹಂಬಲದ ಪ್ರಯತ್ನವೇ ಈ ಕಿರುಹೊತ್ತಿಗೆಯಲ್ಲಿ ರೂಪುಗೊಂಡಿದೆ. ಇದು ಸಂಶೋಧನಾತ್ಮಕವಾಗಿ ಇರುವುದಕ್ಕಿಂತಲೂ ಮುಖ್ಯವಾಗಿ ಎರಡು ದಶಕಗಳಿಗೂ ಮೀರಿ ಸೋಲಿಗರೊಡನೆ ಕೆಲಸ ಮಾಡಿದ ಈ ಲೇಖಕರ ಅನುಭವಾತ್ಮಕವಾಗಿದ್ದು ಲೇಖನಗಳನ್ನೊಳಗೊಂಡಿದೆ. ಈ ಹಿನ್ನೆಲೆಯಲ್ಲಿ ಸೋಲಿಗ ವಿದ್ಯಾವಂತ ಯುವಜನರು ತಮ್ಮ ಸುಂದರ ಸಂಸ್ಕೃತಿಯ ಇನ್ನೂ ಹೆಚ್ಚಿನ ಪರಿಚಯವನ್ನು ಓದುಗರಿಗೆ ನೀಡಲೆಂಬುದು ಲೇಖಕರ ಆಶಯ.

**'ಸೋಲಿಗಜನಜೀವನ'**ದಲ್ಲಿ ಅವರ ಸರಳಜೀವನ, ಕೌಟುಂಬಿಕನೆಲೆ, ವಲಸೆ ಮುಂತಾದ ಹಿಂದಿನ ಪದ್ಧತಿಗಳು, ಇಂದೂ ಆಚರಣೆಯಲ್ಲಿರುವ ಪರಾರಿ ವಿವಾಹ, ನ್ಯಾಯ ಮುಂತಾದವೂ, ನಿತ್ಯಜೀವನದ ವಿವರಗಳೂ ಮೂಡಿಬಂದಿವೆ. **'ಜಾನಪದ ಸೊಬಗಿ'**ನಲ್ಲಿ ಕಾಡು, ಮಳೆಹನಿ, ಹೂಗಳು ಮರಗಿಡಗಳನ್ನೊಳಗೊಂಡ ಗೀತಗಳ ಹಿನ್ನೆಲೆಯೂ, ಅವರ ಜೀವನವನ್ನು ಪ್ರತಿಬಿಂಬಿಸುವ ತೊಟ್ಟಿಲ ಕಥಾ ರಮ್ಯತೆಯೂ, ಅದರ ಮೌಖಿಕ ಪರಂಪರೆಯೂ ವರ್ಣಿತವಾಗಿದೆ. **'ಪಾರಂಪರಿಕ ಜ್ಞಾನವಾಹಿನಿ'**ಯು ಸೋಲಿಗರ ದೊಡ್ಡ ಸಿರಿ. ಈ ಅಧ್ಯಾಯದಲ್ಲಿ ಸೋಲಿಗ ಸಮುದಾಯದಲ್ಲಿ ತಲತಲಾಂತರದಿಂದ ಬಂದಿರುವ ವನೌಷಧಿ, ನ್ಯಾಯ ಪದ್ಧತಿ, ಗಿಡಮರ ಪಕ್ಷಿಪ್ರಾಣಿಗಳ ಬಗ್ಗೆ ಜ್ಞಾನ, ಅವರ ಅತೀಂದ್ರಿಯ ಕಲ್ಪನೆಗಳ ಹಿಂದಿರುವ ಭದ್ರನೆಲೆ ಮುಂತಾದವನ್ನು ಪ್ರಶಂಸಿಸಲಾಗಿದೆ. **'ವಿಶ್ವಶಾಂತಿ ಹೊಂಗಿರಣ'** ದಲ್ಲಿ ಹೇಗೆ ಆದಿವಾಸಿ ಸಂಸ್ಕೃತಿಯ ನೆಲಗಟ್ಟುಗಳಾದ ಸರಳತೆ, ಹಂಚಿಕೊಂಡು ಬಾಳುವುದು, ಕೂಡಿಡದೆ ಇರುವುದು, ಪ್ರಕೃತಿಯೊಡನೆ ನಿಕಟ

ಸಂಬಂಧದಲ್ಲಿ ಔದಾರ್ಯ, ಇವೆಲ್ಲದರೊಡನೆ ಆಧುನಿಕ ವೈಜ್ಞಾನಿಕ ಮನೋಭಾವನೆಯನ್ನು ಹೊಂದಿ ಆದಿವಾಸಿ ಸಂಸ್ಕೃತಿಯನ್ನು ಬುಡ ವಾಗಿಟ್ಟು ಹೊಸ ಮಾನವ ಸಂಸ್ಕೃತಿಯನ್ನು ರೂಪಿಸಲು ಸಾಧ್ಯತೆಯಿದೆ ಯೆಂಬುದು ಚರ್ಚಿತವಾಗಿ ಆ ಹೊಸ ಜೀವನದಲ್ಲಿ ವಿಶ್ವಶಾಂತಿ ಮೂಡಿ ಬರುವುದೆಂಬ ಸದಾಶಯವನ್ನು ಪ್ರತಿಪಾದಿಸಲಾಗಿದೆ. ಈ ಹೊತ್ತಿಗೆಯ ಅನುಬಂಧದಲ್ಲಿ ಪಾರಿಭಾಷಿಕ/ವಿಷಯಸೂಚಿ ಪದಗಳ **'ಪದ ಪುಸುಮಾಲೆ'** ಯನ್ನು ಕೊಡಲಾಗಿದೆ.

ಕರ್ನಾಟಕ ಜನತೆಗೆ ಚಿರಪರಿಚಿತರಾದ, ಗಿರಿಜನ ಅಭ್ಯುದಯಕ್ಕೆ ಧ್ರುವತಾರೆಯಂತಿರುವ ಮತ್ತು ಸ್ವಯಂ ಸೇವಾಕಾರ್ಯಕ್ಕೆ ಅದರಲ್ಲಿಯೂ ವಿಶೇಷವಾಗಿ ಪ್ರಾಥಮಿಕ ಆರೋಗ್ಯ ಕಾರ್ಯವು ಔನ್ನತ್ಯಗೊಳ್ಳುವಂತೆ ಹೊಸ ಆಯಾಮ ನೀಡಿದ ಪದ್ಮಶ್ರೀ ಡಾ॥ ಎಚ್. ಸುದರ್ಶನ್‌ರವರು ಈ ಪುಸ್ತಕಕ್ಕೆ ಅಮೂಲ್ಯ ಮುನ್ನುಡಿ ಬರೆದು ತಮ್ಮ ಸಹೃದಯತೆಯನ್ನು ವ್ಯಕ್ತಪಡಿಸಿದ್ದಾರೆ. ಈ ಪುಸ್ತಕದ ಲೇಖಕರು ಅವರ ಮಾರ್ಗದರ್ಶನದಲ್ಲಿ ಅನೇಕ ವರ್ಷಗಳ ಕಾಲ ಗಿರಿಜನ ಅಭಿವೃದ್ಧಿ, ವೃತ್ತಿ ಶಿಕ್ಷಣ, ಸಂಘಟನೆ, ಇನ್ನೂ ಅನೇಕ ಕಾರ್ಯಗಳಿಗಾಗಿ ಶ್ರಮಿಸಿದವರೇ! ಹೀಗೆ ಅತ್ಯಂತ ನಿಕಟವಾಗಿ ಅವರೊಡನೆ ಕಾರ್ಯನಿರ್ವಹಿಸಿದ ಸುಯೋಗದೊಡನೆ ಈ ಲೇಖನಗಳನ್ನು ಉಪಯುಕ್ತ ವನ್ನಾಗಿ ಕಂಡು ಬೆಂಬಲಿಸಿದ್ದಕ್ಕಾಗಿ ಡಾ॥ ಸುದರ್ಶನ್‌ರವರಿಗೆ ನನ್ನ ಕೃತಜ್ಞತೆಗಳು.

ಈ ಕೃತಿಗೆ ಮುಖ್ಯ ಆಧಾರವೆಂದರೆ ಸೋಲಿಗ ಹಿರಿಯರೊಡನೆ ಮಾತು ಕತೆ ಮತ್ತು ಜನರೊಡನೆ ವಾಸಿಸಿದ ಅನುಭವ. ಅವರಿಗೆಲ್ಲರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ. ಅವರಲ್ಲನೇಕರು ಈಗಿಲ್ಲದಿರುವುದೇ ದುಃಖದ ಸಂಗತಿ. ಇದಲ್ಲದೆ ನಮ್ಮ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದ



ಆಡಳಿತ ವರ್ಗ, ವೈದ್ಯರು, ಸಮಾಜ ಕಾರ್ಯಕರ್ತರು, ಅಧ್ಯಾಪಕ ವೃಂದ ದವರು, ಇನ್ನೂ ಇತರ ಕಾರ್ಯನಿರತರು ತಮ್ಮ ಬೆಂಬಲ ಕೊಟ್ಟು ಸಹಕರಿಸಿರುತ್ತಾರೆ. ಅವರಿಗೆಲ್ಲರಿಗೂ ನನ್ನ ಕೃತಜ್ಞತೆಗಳು. ಹಾಗೆಯೆ ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟಿರುವ ಶ್ರೀ ಚಾಮುಂಡೇಶ್ವರಿ ಪ್ರಿಂಟರ್ಸ್‌ನವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಈ ಪುಸ್ತಕದಲ್ಲಿ ಬೇರೆ ಬೇರೆ ದೃಷ್ಟಿಕೋನಗಳ ಚರ್ಚೆಯ ಸಂದರ್ಭ ದಿಂದಾಗಿ ಅನೇಕ ಬಾರಿ ವಿಷಯಗಳು ಪುನರಾವರ್ತನೆಗೊಳ್ಳುತ್ತವೆ. ಆದ್ದರಿಂದ ಸಂದರ್ಭೋಚಿತವಾಗಿ ಇದನ್ನು ಸ್ವೀಕರಿಸಬೇಕೆಂದು ಓದುಗರಲ್ಲಿ ವಿನಂತಿ. ಸುಂದರ ಸೋಲಿಗ ಸಂಸ್ಕೃತಿಯ ಬಗ್ಗೆ ಓದುಗರಲ್ಲಿ ಆದರ ಅಭಿಮಾನಗಳನ್ನು ಮೂಡಿಸಿದರೆ ನನ್ನ ಕಿಂಚಿತ್ ಪ್ರಯತ್ನವು ಸಾರ್ಥಕವಾದಂತೆ.

ಬೆಂಗಳೂರು **- ಎಚ್.ಎನ್. ಸೋಮಸುಂದರಂ**
15-8-2009

## ಪರಿವಿಡಿ



## ಅರ್ಪಣೆ

ತಮ್ಮ ತಾಳ್ಮೆ ಜಾಣ್ಮೆ
ಸ್ಥಳೀಯ ಜ್ಞಾನ ಔದಾರ್ಯಗಳಿಂದ
ನಮಗೆ ನೆರವಾದ
ಸೋಲಿಗ ಗಿರಿಜನ
ಎಲ್ಲ ಹಿರಿಯ ಕಿರಿಯ ಬಂಧುಗಳಿಗೆ
ಈ ಕೃತಿ ಅರ್ಪಿತ.

## ದೊಡ್ಡ ಸಂಪಿಗೆ ಸ್ವಾಮಿಗೆ ಬಿನ್ನ!

ದೊಡ್ಡ ಸಂಪಿಗೆ ನನ್ನೊಡೆಯ
ಕಾತುಕಾಪಾಡಿ ಮಡಗುನಯ್ಯ
ಗೋರು ಗೋರೂಕೂ ಗೋರೂಕಾನಾ

ಕಾವಿಕಂತೆ ಹೊತ್ತೂರಯ್ಯಾ
ಬಂದು ನಿಂದವನೆ ರಂಗದಲ್ಲಿ
ಗೋರು ಗೋರೂಕೂ ಗೋರೂಕಾನಾ

ಹೂವಿನ ಕೊಂಬು ಮುರಿಯಾಗಿಲ್ಲೆ
ಮೊಗ್ಗಿನ ಕೊಂಬು ಬಾಡಾಗಿಲ್ಲೆ
ಮೊಗ್ಗು ಮೊಗುರೆಲ್ಲಾ ನಿನ್ನದಯ್ಯೋ
ಕಣ್ಣಿಟ್ಟು ನೋಡುನು ದೇವಾರೆ॥

ಹಾಗೆವೇ ನೆನೆದು ನೋಡಿದಲೆ
ಜೀವನೆ ಬೆಂಡು ಆದದೆಲೋ
ಕಾರೆಲೆ ಹಾಗೆ ಕರಗಿದದೆ
ಬೆಂಡೆಲೆ ಹಾಗೆ ಬೆಂದದೆಲ॥
ಗೋರು ಗೋರೂಕೂ ಗೋರೂಕಾನಾ

ಇನ್ನಿಂತ ವರ್ಷ ಬಾರನಯ್ಯೋ
ಕಾಪಿಟ್ಟು ಮಡುಗುನು ದೇವರಯ್ಯ
ಗೋರು ಗೋರೂಕೂ ಗೋರೂಕಾನಾ॥

(ವಿವರಣೆಗಾಗಿ 67ನೆಯ ಪುಟ ನೋಡಿ)

# ೧. ಸೋಲಿಗ ಜನಜೀವನ

### ಆದಿವಾಸಿ ಸಮುದಾಯಗಳು

ಆದಿವಾಸಿ ಜನಾಂಗ ಸಮುದಾಯಗಳು ದೇಶಾದ್ಯಂತ ಎಲ್ಲ ಕಡೆಯೂ ಹರಡಿ ಹಂಚಿಹೋಗಿವೆ. ಆದಿವಾಸಿ ಜನರನ್ನು ಈ ಹೆಸರಿನಿಂದ ಮಾತ್ರ ವಲ್ಲದೆ ಗಿರಿಜನರು, ಬುಡಕಟ್ಟು ಜನರು, ಮೂಲ ನಿವಾಸಿಗಳು ಮುಂತಾದ ಹೆಸರುಗಳಿಂದಲೂ ಗುರುತಿಸಲಾಗಿದೆ. ಹೆಸರು ಏನೇ ಇರಲಿ, ಈ ಜನರು, ನಿರ್ವಿವಾದವಾಗಿ (ಒಂದೆರಡು ಅಪವಾದಗಳನ್ನು ಹೊರತುಪಡಿಸಿ) ನಮ್ಮ ದೇಶದ ಅಪ್ಪಟ ದೇಶಿಯ ಜನರೆಂಬುದು, ಅವರೇ ಮೊದಲಿಗರೆಂಬುದು ಸತ್ಯ. ನಮಗೆ ತಿಳಿದಿರುವ ಯಾವುದೇ ಚರಿತ್ರೆಯ ನಿಲುಕಿಗೆ ಸಿಲುಕದೆ, ನಾಗರಿಕತೆಗಳ ದಾಳಿಗಳಿಗೆ ತುತ್ತಾಗುವುದಕ್ಕಿಂತ ಬಹುಮುನ್ನ ಬೆಟ್ಟ ಅರಣ್ಯ ಕಣಿವೆಗಳಲ್ಲಿ ಶಾಂತರಾಗಿ, ಸರಳರಾಗಿ, ಪ್ರಕೃತಿದತ್ತ ನೆಲ, ನೀರು ಅರಣ್ಯ ಗಳನ್ನು ಉಪಯೋಗಿಸಿಕೊಂಡು ಅನಿರ್ಬಂಧಿತವಾಗಿ ವಾಸಿಸುತ್ತಿದ್ದ ಜನರೇ ಈ ಆದಿವಾಸಿಗಳು.

ಕರ್ನಾಟಕದಲ್ಲಿ ಸೋಲಿಗ, ಜೇನು ಕುರುಬ, ಬೆಟ್ಟ ಕುರುಬ, ಯರವ ಮುಂತಾದ ಪಂಗಡಗಳಿದ್ದು ಮುಖ್ಯವಾಗಿ ಅರಣ್ಯವನ್ನು ಜೀವಿತಕ್ಕಾಗಿ ಅವಲಂಬಿಸಿವೆ. ಆದ್ದರಿಂದಲೇ ಈ ಪಂಗಡಗಳಲ್ಲಿ ಸಹಜ ಸುಂದರ ವಾಗಿಯೇ ರೂಪಿತವಾಗಿದ್ದ ಅರಣ್ಯ ಸಂಸ್ಕೃತಿಯೇ ಉಳಿದುಕೊಂಡು ಬಂದಿದೆ. ಇದಕ್ಕೆ ಹೊರ ಪ್ರಭಾವಗಳು ತಕ್ಕಮಟ್ಟಿಗೆ ಕಡಿಮೆಯಾಗಿದ್ದುದು ಕಾರಣವಾಗಿರುವಂತೆ ಸ್ವಂತಿಕೆಯನ್ನು ಬಿಟ್ಟುಕೊಡದ ನಿಕಟ ಸಮುದಾಯ ಜೀವನವೂ, ಗಿರಿಜನರಲ್ಲಿ ಸಹಜವಾಗಿರುವ ಆತ್ಮಪ್ರತ್ಯಯವೂ ಸಹಕರಿಸಿವೆ.

## 'ಸೋಲಿಗ' ಪದದ ಉಗಮ

ಪ್ರಸಕ್ತ ಚರ್ಚಿಸುತ್ತಿರುವುದು ಸೋಲಿಗ ಆದಿವಾಸಿ ಸಮುದಾಯ ವಾಗಿದ್ದು, ಈ ಜನಾಂಗಕ್ಕೆ ಸೋಲಿಗ ಎಂಬ ಹೆಸರು ಬರಲು ಕೆಲವು ಸ್ವಾರಸ್ಯಕರ ನಿರೂಪಣೆಗಳಿವೆ. ಸೋಲಿಗ ಭಾಷೆಯಲ್ಲಿ ಸೋಲ ಎಂದರೆ ಬಿದಿರು. ತಾವು ಬಿದಿರಿನಿಂದ ಬಂದವರೆಂದು ಸೋಲಿಗರು ಹೇಳಿಕೊಳ್ಳು ತ್ತಾರೆ. ಮೊರಬ್‌ರವರು ಬಾಲಕೃಷ್ಣರವರನ್ನು ಉಲ್ಲೇಖಿಸುತ್ತಾ 'ಸೋಲಿಗ' ಎಂಬ ಪದ 'ಸೋಯಿಗ' ಎಂಬುದರಿಂದ ಬಂದಿದೆ. 'ಸೋಯಿಗ' ಎಂಬುದು 'ಸ್ವಾಮಿಗ' ಎಂಬ ಪದಕ್ಕೆ ತದ್ಭವ ರೂಪ, 'ಸ್ವಾಮಿಗ' ಎಂದರೆ ಸ್ವಾಮಿಗೆ ಸಂಬಂಧಿಸಿದವರು. ಸ್ವಾಮಿ ಎಂದರೆ ಈ ಸರಹದ್ದಿನಲ್ಲಿ ಮಹದೇಶ್ವರ ಸ್ವಾಮಿ; ಮಹದೇಶ್ವರ ಸ್ವಾಮಿಯ ಒಕ್ಕಲಾದ್ದರಿಂದ 'ಸ್ವಾಮಿಗ' ರಾಗಿ ಈ ಜನ ಸೋಲಿಗರಾದರು. ಈ ರೀತಿಯಾಗಿ ಅರ್ಥವನ್ನು ಮಾಡು ತ್ತಾರೆ. ಇನ್ನೊಂದು ಪಾಠದ ಪ್ರಕಾರ ಸೋಲಿಗ ಪದವು ತಮಿಳು ಪದ 'ಸೋಲೈ'ನಿಂದ ಬಂದಿದ್ದು, ದಟ್ಟವಾದ ಮೆಳೆ, ಗುತ್ತಿ, ಕಾಡು ಎಂಬ ಅರ್ಥ ಗಳನ್ನು ಹೊಂದಿ ಅಂತಹ ಪ್ರದೇಶಗಳಲ್ಲಿ ವಾಸಿಸುವ ಜನರು ಎಂದು ತಿಳಿಯಬಹುದು. ಹೀಗೆ ಅರ್ಥಗಳು ಏನಾದರೂ ಇರಲಿ, ಇವೆಲ್ಲದ ರಿಂದಲೂ ಸೋಲಿಗರು ದಟ್ಟಾರಣ್ಯಗಳಲ್ಲಿ ವಾಸಿಸುವ ಜನರಾಗಿದ್ದಾರೆಂಬು ದಾಗಿ ಸಿದ್ಧವಾಗುತ್ತದೆ.

ಸೋಲಿಗರು ತಮ್ಮ ಮೂಲ ಪುರುಷನು ಕಾರಯ್ಯಸ್ವಾಮಿ ಎಂದು ಗುರ್ತಿಸಿಕೊಳ್ಳುತ್ತಾರೆ. ಕಾರಯ್ಯ ಮತ್ತು ಬಿಲ್ಲಯ್ಯರು ಮಹದೇಶ್ವರರ ಕೃಪೆಯಿಂದ ಹುಟ್ಟಿದ್ದು ಅವರು ಆ ಮಕ್ಕಳನ್ನು ಸಂಕಮ್ಮ ನೀಲಯ್ಯರಿಂದ ಭಿಕ್ಷೆ ಪಡೆದುಕೊಳ್ಳುತ್ತಾರೆ. ಕಾರಯ್ಯನು ಕಾಡು ಸ್ವಭಾವದವನಾಗಿದ್ದನ್ನು ಕಂಡು ಅವನನ್ನು ಕಾಡಿನಲ್ಲಿಯೂ ಬಿಲ್ಲಯ್ಯನು ಮೃದು ಪ್ರಕೃತಿಯವನಾಗಿದ್ದನ್ನು ಗಮನಿಸಿ ಅವನನ್ನು ನಾಡಿನಲ್ಲಿಯೂ ನೆಲೆಸುವಂತೆ ಮಾಡುತ್ತಾರೆ, ಕಾರಯ್ಯನ ವಂಶಜರೇ ಸೋಲಿಗರು ಎಂಬುದಾಗಿ ಕಥೆಯಿದೆ.



## ಸೋಲಿಗ ಜನಾಂಗದ ಗುಣಲಕ್ಷಣಗಳು

ಆದಿವಾಸಿಗಳಾದ ಸೋಲಿಗರು ಕಷ್ಟಜೀವಿಗಳು, ಸಾಮಾನ್ಯವಾಗಿ ಹೆಚ್ಚು ಎತ್ತರವಿಲ್ಲದೆ, ಕಂದು ವರ್ಣದವರಾಗಿ, ಚಪ್ಪಟೆ ಮೂಗು, ಗುಂಗುರು ಕೂದಲಿನಿಂದ ಕೂಡಿರುವ ಸೌಮ್ಯ ಸ್ವಭಾವದವರು. ಚಾಮರಾಜನಗರ ಜಿಲ್ಲೆಯ ಯಳಂದೂರು, ಕೊಳ್ಳೇಗಾಲ, ಚಾಮರಾಜನಗರ, ಗುಂಡ್ಲುಪೇಟೆ ಬೆಟ್ಟ ಅರಣ್ಯಪ್ರದೇಶಗಳಲ್ಲಿಯೂ, ಮೈಸೂರು ಜಿಲ್ಲೆಯ ಹುಣಸೂರು, ಹೆಚ್.ಡಿ.ಕೋಟೆ, ನಂಜನಗೂಡು ತಾಲ್ಲೂಕುಗಳ ಬೆಟ್ಟ ಅರಣ್ಯ ಪ್ರದೇಶ ಗಳಲ್ಲಿಯೂ ವಾಸವಾಗಿರುವರು. ಇದಲ್ಲದೆ ಕನಕಪುರ ತಾಲ್ಲೂಕಿನಲ್ಲಿಯೂ ಕೊಡಗು ಜಿಲ್ಲೆಯಲ್ಲಿಯೂ ಸೋಲಿಗರು ವಾಸವಾಗಿರುವರು. ಆಯಾ ಪ್ರದೇಶದ ವಿಶಿಷ್ಟ ಗುಣಲಕ್ಷಣಗಳೂ, ಜೊತೆಗೆ ಇತರ ಆದಿವಾಸಿ ಪಂಗಡ ಗಳಾದ ಜೇನು ಕುರುಬ, ಬೆಟ್ಟ ಕುರುಬ, ಯರವ ಮುಂತಾದವುಗಳ ಪ್ರಭಾವವೂ ಅಲ್ಲಲ್ಲಿನ ಸೋಲಿಗರ ನಡೆನುಡಿಗಳಲ್ಲಿ ಕಂಡು ಬರುವುದು. ಕರ್ನಾಟಕದ ಕಡೆ ಐದುಕುಲ ಸೋಲಿಗರು ವಾಸವಾಗಿದ್ದರೆ, ಸರಹದ್ದಿನ ತಮಿಳುನಾಡು ಅರಣ್ಯ ಪ್ರದೇಶಗಳಾದ ಗದ್ದೆಸಾಲು ಮುಂತಾದೆಡೆಯಲ್ಲಿ 'ಏಳುಕುಲ'ದ ಸೋಲಿಗರು ಕಂಡು ಬರುವರು. ಇಲ್ಲಿಂದ ಅಲ್ಲಿಗೂ ನೆಂಟಸ್ತನವೂ ಇದ್ದು ಜನ ಹೋಗಿಬರುವರು.

## ವಲಸೆ

ಸೋಲಿಗರನ್ನು 'ನೆಲಸಿದ್ದಾರೆ' ಎಂದು ಹೇಳಲು ಕಷ್ಟ. ಏಕೆಂದರೆ ಸೋಲಿಗರು ಅರೆ ಅಲೆಮಾರಿ ಜನಾಂಗವಾಗಿದ್ದು, ಆ ಪ್ರದೇಶಗಳಿಗಿಂತ ಬಹುದೂರಕ್ಕೆ ಹೋಗದಿದ್ದರೂ ಅಲ್ಲಲ್ಲಿಯೇ ವಲಸೆ ಹೋಗುತ್ತಿದ್ದರು.

ಈ ವಲಸೆಗೂ ಕಾರಣಗಳೂ ಇಲ್ಲದಿಲ್ಲ. ಮೊದಲನೆಯದು, ವಲಸೆ ಅವರ ರಕ್ತದಲ್ಲಿಯೇ ಬಂದು, ಹೋಗುವ ಮನದಿಚ್ಛೆ ಬಂದಾಗ ಹೊರಡು ವುದು ಒಂದು ಬಗೆ. ಮತ್ತೊಂದು ಕಾರಣ 4-5 ವರ್ಷ ಒಂದು ಕಡೆ

ಕಡಕೋಳು ಬೇಸಾಯ ಮಾಡಿ, ನೆಲದ ಫಲವತ್ತತೆ ಸ್ವಾಭಾವಿಕವಾಗಿಯೇ ಕಡಿಮೆಯಾದಾಗ ಹೋಗುವ ಆವಶ್ಯಕತೆ ಇದ್ದಿತು. ಮೂರನೆಯ ಕಾರಣವೆಂದರೆ ಯಾವುದಾದರೂ ಸ್ಥಳ ಆಗಬರದಿದ್ದರೆ ಹೋಗುವುದು, ಅಂದರೆ ಅನಾಹುತ ಸಂಭವಿಸುವುದು ಇತ್ಯಾದಿ. ಇದರ ಮುಂದುವರಿಕೆಯಾಗಿ ನಾಲ್ಕನೆಯ ಕಾರಣ ನೋಡಬಹುದಾದರೆ 'ಗೋರ' ಸಂಭವಿಸಿದಾಗ ವಲಸೆ ಹೋಗುತ್ತಿದ್ದರು. 'ಗೋರ'ವೆಂದರೆ ಸಾಮಾನ್ಯವಾಗಿ ಅಂದಿನ ಕಾಲದಲ್ಲಿ ಕಾಡಿಸುತ್ತಿದ್ದ ಸಿಡುಬು ಪಿಡುಗು. ಪ್ಲೇಗು, ಕಾಲರ ಮುಂತಾದವೂ 'ಗೋರ'ವೇ. ಹಿರಿಯ ಸೋಲಿಗರು ಇಂದಿಗೂ ಅಂತಹ ದಿನಗಳನ್ನು ನೆನಪಿಸಿಕೊಳ್ಳುತ್ತಾರೆ.

ಸಾಮಾನ್ಯ ಸಂದರ್ಭಗಳಲ್ಲಿ ಸೋಲಿಗರು ತಮ್ಮ ಅಲ್ಪವಸ್ತುಗಳನ್ನು ತೆಗೆದುಕೊಂಡು ವಲಸೆ ಹೋಗುತ್ತಿದ್ದರಾದರೂ, 'ಗೋರ' ಸಂದರ್ಭದಲ್ಲಿ ಏನನ್ನೂ ತೆಗೆದುಕೊಳ್ಳದೆ, ನಾಯಿ ಬೆಕ್ಕುಗಳನ್ನು ಸಹ ಅಲ್ಲಿಯೇ ಕಟ್ಟಿ, ಅಳಿದುಳಿದಿರುವ ರೋಗಿಗಳಿಗೆ ದೊಡ್ಡ ಮಡಿಕೆಗಳಲ್ಲಿ ರಾಗಿ ಗಂಜಿಗೆ ಏರ್ಪಡಿಸಿ, ಧೈರ್ಯಶಾಲಿಗಳಾದ ಕೆಲವು ಹಿರಿಯರನ್ನು ಅಲ್ಲಿ ಶುಶ್ರೂಷೆಗೆ ಬಿಟ್ಟು ಮಿಕ್ಕವರು ಉಟ್ಟ ಬಟ್ಟೆಯಲ್ಲಿ ವಲಸೆ ಹೋಗುತ್ತಿದ್ದರು. ವಿಜ್ಞಾನದ ಯಾವ ಪಾಠವನ್ನೂ ಓದದೆ ಇದ್ದರೂ ಅವರು ಆದಷ್ಟು ರೋಗವನ್ನು ಅಲ್ಲಿಯೆ ಬಿಟ್ಟು ಬರಲು ಅನುಸರಿಸುತ್ತಿದ್ದ ಯುಕ್ತಕ್ರಮಗಳು ಮೆಚ್ಚಬೇಕಾದುದೇ.

ಹಾಗೆಯೇ ರೋಗಿಗಳ ಬಗ್ಗೆ ಅನುಕಂಪ, ಸೇವೆ ಮತ್ತು ಸಾಧ್ಯವಾದಷ್ಟು ಗುಣ ಹೊಂದಿದವರನ್ನು ಕರೆಸಿಕೊಳ್ಳುವ ಮನೋಭಾವವೂ ಇಲ್ಲಿ ನಮಗೆ ಮನದಟ್ಟಾಗುತ್ತದೆ.

ಹೀಗೆ ವಲಸೆ ಹೊರಟ ಗಿರಿಜನರು ತಮಗೆ ತೋರಿದ ಮಟ್ಟಿಗೆ ಪ್ರಶಸ್ತವಾದ ಸ್ಥಳ, ಅಂದರೆ ಎತ್ತರದಲ್ಲಿ ಕಾಡುಮೃಗಗಳ ಕಾಟದಿಂದ



ಸಾಕಷ್ಟು ರಕ್ಷಣೆ ಇರುವ ಮತ್ತು ನೀರು ಸೌಕರ್ಯವೂ ಸ್ವಲ್ಪ ದೂರದಲ್ಲಿ ಇದ್ದು ಅದಕ್ಕಾಗಿ ಮೃಗಗಳು ಬಂದಾಗ ತಮಗೆ ತೊಂದರೆಯಾಗದ ರೀತಿಯಲ್ಲಿದ್ದ ಸ್ಥಳಗಳನ್ನು ಹುಡುಕುತ್ತಿದ್ದರು. ಸಾಮಾನ್ಯವಾಗಿ ಯಜಮಾನರುಗಳು ಮುಂದೆ ಹೋಗಿ ಆಯ್ಕೆ ಮಾಡಿದ ನಂತರ ಮಿಕ್ಕವರು ಪ್ರಯಾಣಿಸುತ್ತಿದ್ದಂತೆ ತಿಳಿದುಬರುವುದು.

ಹಾಗೆ ಪ್ರಶಸ್ತವೆಂದು ತೋರಿದ ಸ್ಥಳದಲ್ಲಿ ಒಂದು ನೆರಳಿನ ಜಾಗ ಹುಡುಕಿ ದೇವರಿಗೆ ಪೂಜೆ ಸಲ್ಲಿಸಿ, 'ಅಳ್ಳುಶಾಸ್ತ್ರ' ಮಾಡಿ, ಅಂದರೆ ಏಳು ಹರಳು ಬೀಜ ಅಥವಾ ಚಿಕ್ಕ ಹರಳು ಕಲ್ಲುಗಳನ್ನು ಸಾಲಾಗಿಟ್ಟು, ಅದರ ಮೇಲೆ ಒಂದು ಚಿಕ್ಕ ಬುಟ್ಟಿ ಮುಚ್ಚಿ ಅದನ್ನು ಕಲಸಿದ ಮಣ್ಣಿನಿಂದ ಒಂದು 'ಇರ' (ಇರುವೆ) ಸಹ ಬಾರದ ರೀತಿಯಲ್ಲಿ ಮೆತ್ತಿ, ರಾತ್ರಿ ಅಲ್ಲಿಯೇ ಮಲಗುತ್ತಿದ್ದರು. ಬೆಳಗ್ಗೆ ಬುಟ್ಟಿಯನ್ನು ತೆರೆದಾಗ ಹರಳು ಬೀಜ ಚದುರಿರಬಾರದು. ಚದುರಿದ್ದರೆ ಆ ಸ್ಥಳ ಸರಿಯಲ್ಲವೆಂದರ್ಥ, ಹಾಗೆಯೇ ರಾತ್ರಿ ಒಳ್ಳೆಯ ಕನಸುಗಳೂ ಬೀಳಬೇಕು. ಹೀಗೆ ಇನ್ನೂ ಕೆಲವು ಲಕ್ಷಣಗಳನ್ನು ನೋಡಿ ಸ್ಥಳ ನಿಷ್ಕರ್ಷೆ ಮಾಡಿ ಅಲ್ಲಿ ನೆಲಸುತ್ತಿದ್ದರು. ಅಲ್ಲಿ ಸ್ವಲ್ಪ ಸ್ಥಳವನ್ನು ಸವರಿ ಶುದ್ಧಿಗೊಳಿಸಿ, ಸವರಿದ ಚಿಕ್ಕ ಸಸ್ಯಗಳನ್ನು ಸುಟ್ಟು, ಆ ಬೂದಿಯನ್ನು ನೆಲದಲ್ಲಿ ಕದಡಿ ಮಳೆ ಬಂದ ನಂತರ ಬೀಜ ಬಿತ್ತುತ್ತಿದ್ದರು. ಇದೇ ಪಾಳೀಯ ಬೇಸಾಯ. ಕಳಕೋಟ್ಲು ಉಪಯೋಗಿಸುತ್ತಿದ್ದರಿಂದ ಇದಕ್ಕೆ ಕಳಕೋಟ್ಲು ಬೇಸಾಯವೆಂದೂ ಕರೆಯುತ್ತಿದ್ದರು.

ಅಂದಿನ ಗಿರಿಜನ ಸಂಖ್ಯೆ ಕಡಿಮೆಯಿದ್ದು ಕೇವಲ ತಮ್ಮ ಅತ್ಯಗತ್ಯಗಳಿಗಾಗಿ ಅರಣ್ಯವನ್ನು ಉಪಯೋಗಿಸುತ್ತಿದ್ದರಿಂದಲೂ ಅಗತ್ಯಗಳೇ ಕಡಿಮೆಯಿದ್ದುದರಿಂದಲೂ ಕಾಡಿನ ಮೇಲೆ ಗಿರಿಜನರ ಒತ್ತಡ ಬೀಳುತ್ತಿರಲಿಲ್ಲವೆನ್ನಬಹುದು. ಅದಲ್ಲದೆ ಒಂದು ಸ್ಥಳದಲ್ಲಿ ಕೆಲವು ವರ್ಷ ಪೋಡು ಮಾಡಿದ ನಂತರ ಎರಡು ಬಾರಿ ಬಿದಿರು ಹೂ ಬಿಡುವವರೆಗೆ ಅಲ್ಲಿ ಹೋಗು

ತ್ತಿರಲಿಲ್ಲವಾದ್ದರಿಂದ (ಅಂದರೆ ಬಿದಿರು 60 ವರ್ಷಕ್ಕೊಮ್ಮೆ ಹೂ ಬಿಡುವುದರಿಂದ) ಎರಡು ಬಾರಿಗೆ 120 ವರ್ಷಗಳೇ ಬೇಕಾದ್ದರಿಂದ ಮತ್ತೆ ಸಮೃದ್ಧ ಅರಣ್ಯ ಬೆಳೆಯುತ್ತಿದ್ದಿತು. ಹೀಗೆ ಪ್ರಕೃತಿಯೊಡನೆ ಹೊಂದಾಣಿಕೆಯಲ್ಲಿ ತಮ್ಮ ಜೀವನವನ್ನು ಮಾಡುತ್ತಿದ್ದರು ಸೋಲಿಗ ಗಿರಿಜನರು.

## ನಿಸರ್ಗದ ಹಿನ್ನೆಲೆ

ಈ ಸರಹದ್ದಿನ ಸೋಲಿಗ ಕುಟುಂಬಗಳು ಸಾಮಾನ್ಯವಾಗಿ ವಿಭಕ್ತ ಕುಟುಂಬಗಳಾಗಿದ್ದು ಮದುವೆಯಾದ ಗಂಡು ಹೆಣ್ಣುಗಳು ತಮ್ಮದೇ ಗುಡಿಸಲನ್ನು ಕಟ್ಟಿಕೊಂಡರೂ, ಅವರ ಸಮುದಾಯ ಜೀವನವೇ ಭದ್ರತೆಯ ಅಡಿಪಾಯವಾಗಿದೆ. ಯಾರಾದರೂ ಎರಡನೇ ಮದುವೆಯಾಗುವ ಸಂಭವ ಬಂದರೂ ಮುನ್ನಿನ ಮಕ್ಕಳನ್ನು ಪ್ರೀತಿಯಿಂದಲೇ ಸಾಕುವುದೂ, ತಮ್ಮಲ್ಲಿ ಯಾವುದೇ ವಂಚಿತ ಮಗುವಿದ್ದರೂ ಸಮುದಾಯವೇ (ಅಂದರೆ ಯಾರಾದರೂ ಅವರ ಬಳಗದವರು) ನೋಡಿಕೊಳ್ಳುವುದೂ, ನಾಳೆಗಾಗಿ ಏನನ್ನೂ ಕೂಡಿಡದೆ ಇರುವ ವೈಶಿಷ್ಟ್ಯವೂ ಈ ಸಮುದಾಯಗಳಲ್ಲಿದೆ. ಪ್ರತಿ ದಿನ ಪ್ರತಿಕ್ಷಣ ಹಂಚಿಕೊಂಡು ತಿನ್ನುವ ಸರಳಜೀವನದ ಅಲ್ಪಾಶೆಯ ಸಹೃದಯತೆಯ ಮೌಲ್ಯಗಳೂ, ನಿಸರ್ಗದೊಡನೆ ಶೃತಿಗೊಂಡ ಪ್ರಕೃತಿಯಾಧಾರಿತ ಮೌಲ್ಯಗಳೂ, ಪ್ರೇಮ, ಪರಸ್ಪರ ಗೌರವ, ಜೀವನ ಮೌಲ್ಯಗಳೂ, ಇವನ್ನು ಆಧರಿಸಿದ ಸಾಮಾಜಿಕ ಜೀವನ, ತಮ್ಮದೇ ಆರೋಗ್ಯ ಪದ್ಧತಿ, ವನೌಷಧಿಗಳು, ವಿಭೂತಿ ಮಂತ್ರ ಚಿಕಿತ್ಸೆ, ಸರಳ ಕಡಕೋಲು ಬಹುಧಾನ್ಯ ಬೇಸಾಯ, ತಮ್ಮದೇ ನ್ಯಾಯ ಪಂಚಾಯಿತಿ, ಕಾಡಿನ ಉತ್ಪನ್ನಗಳ ಸಂಗ್ರಹಣಾ ಪದ್ಧತಿಗಳೂ ಸೋಲಿಗ ಗಿರಿಜನರನ್ನು ಒಂದು ಶ್ರೀಮಂತ ಸಮುದಾಯ ಸಂಸ್ಕೃತಿಯ ಜನಾಂಗವನ್ನಾಗಿ ರೂಪಿಸಿರುವಂತೆ ಕಾಣುತ್ತದೆ. ಈ ಸರಳ ಅಸಂಗ್ರಹ ಜೀವನ ಶ್ರೀಮಂತಿಕೆಯೇ ಅವರು ಆರ್ಥಿಕವಾಗಿ ಬಡವರಾಗಿ ಉಳಿಯಲು ಬಹುಮಟ್ಟಿಗೆ ಕಾರಣವಾದರೂ,



ಇದು ಅತಿ ರಕ್ತದೊತ್ತಡ, ಸಕ್ಕರೆ ಖಾಯಿಲೆ, ನರರೋಗಗಳಿಂದಲೂ ದೂರವಿರುವಂತೆ ಅನುಗ್ರಹಿಸಿದೆ. ಇದಕ್ಕೆ ನಮ್ಮ ಗಿರಿಜನ ಆಸ್ಪತ್ರೆಯ ದಾಖಲೆಗಳೂ ಸಾಕ್ಷಿಯಾಗಿವೆ.

## ಸ್ಥಳಾಂತರ ಬವಣೆ

ಬಿಳಿಗಿರಿರಂಗನ ಬೆಟ್ಟ ಮತ್ತು ಮಹದೇಶ್ವರ ಬೆಟ್ಟಗಳು ಕ್ರಮವಾಗಿ ಯಳಂದೂರು ಮತ್ತು ಕೊಳ್ಳೆಗಾಲ ತಾಲ್ಲೂಕುಗಳಿಗೆ ಸೇರಿದರೂ ಎರಡೂ ಚಾಮರಾಜನಗರ ಜಿಲ್ಲೆ – ತಮಿಳುನಾಡುಗಳ ಗಡಿ ಪ್ರದೇಶದಲ್ಲಿ ಇವೆ. ದೇಶದಲ್ಲಿ ಅನೇಕ ಕಡೆ ಆದಿವಾಸಿಗಳಿಗೆ ಒದಗಿದ ಬವಣೆ ಇಲ್ಲಿಯೂ ಒದಗಿ ತದನಂತರದ ಪರಿಣಾಮಗಳು ಉಂಟಾಗಿರುವುದು ಗೋಚರಿಸುತ್ತದೆ. ಅದೆಂದರೆ ನಾಡವರು ಆದಿವಾಸಿಗಳನ್ನು ಕಾಡಿನೊಳಕ್ಕೆ ತಳ್ಳುವುದು ಮತ್ತು ಅರಣ್ಯ ಇಲಾಖೆ ಅವರನ್ನು ಕಾಡಿನಿಂದ ಹೊರಹಾಕಲು ಹವಣಿಸುವುದು. ಪರಿಣಾಮವೆಂದರೆ ಅವರು ನಾಡಿನವರಿಂದ ದೂರವಿದ್ದು ಕಾಡಿನ ಅಂಚುಗಳಲ್ಲಿಯೇ ಇರುವ ಪರಿಸ್ಥಿತಿ. ಅನೇಕ ವರ್ಷಗಳು ಅನಿಶ್ಚಿತತೆ, ಭಯ, ಪರಾಧೀನತೆ ಶೋಷಣೆಗಳಲ್ಲಿ ಬಾಳಿರುವುದು, ಕೆಲವೆಡೆ ಇನ್ನೂ ಹಾಗೆಯೇ ಬಾಳುತ್ತಿರುವುದು ಒಂದು ದುರ್ದೈವವೇ ಸರಿ.

## ಪ್ರದೇಶ ಲಕ್ಷಣ

ಸೋಲಿಗರ ಮುಖ್ಯ ಸ್ಥಳವೆಂದು ಹೆಸರಿಸಬಹುದಾದ ಬಿಳಿಗಿರಿರಂಗನ ಬೆಟ್ಟವು ಕರ್ನಾಟಕದ ಚಾಮರಾಜನಗರ ಜಿಲ್ಲೆಯ ಯಳಂದೂರು ತಾಲ್ಲೂಕಿನಲ್ಲಿ ಉತ್ತರ ಅಕ್ಷಾಂಶ 11° 53' ರಿಂದ 12° 3' 15" ಮತ್ತು ಪೂರ್ವ ರೇಖಾಂಶ 77°13' 30" ರಿಂದ 77° 8' 30" ರವರೆಗೆ ಹಬ್ಬಿರುವುದು. ಕೆಲವೆಡೆಗಳಲ್ಲಿ ಬೆಟ್ಟಗಳನ್ನಿಳಿದು ತಮಿಳುನಾಡಿಗೆ ಹೋಗಬಹುದು. ಉಷ್ಣಾಂಶವು ಕೆಲವು ವೇಳೆ 8°C ವರೆವಿಗೂ ಸಹ ಇಳಿಯುವುದು. ಮಳೆ 70 ಇಂಚುಗಳಷ್ಟು ಇರುವುದು. ಕಾಡು ಸಮೃದ್ಧವಾಗಿದ್ದು ಬಹಳ

ಬೆಲೆಬಾಳುವ ಮರಗಳೂ ಸಸ್ಯ ವೈವಿಧ್ಯತೆ ದೃಷ್ಟಿಯಿಂದ ಅಮೂಲ್ಯವಾದ ಸಸ್ಯಸಂಪತ್ತೂ ಇಲ್ಲಿ ಕಂಡುಬರುವುದು. ಮಾಂಸಾಹಾರಿ ಸಸ್ಯವಾದ ಡ್ರಾಸಿರಾ ಎಂಬುದು ಮಲಕಿ ಬೆಟ್ಟದಲ್ಲಿ ಕಂಡು ಬಂದಿರುವುದು. ಬಿಳಿಗಿರಿ ರಂಗನ ಬೆಟ್ಟದ ಕೆಲವು ಪ್ರದೇಶಗಳಲ್ಲಿ ಯಥೇಚ್ಛವಾಗಿ ಕಾಫಿಯನ್ನು ಬೆಳೆಯುತ್ತಿರುವುದು ಬಹಳ ಹಿಂದಿನಿಂದ ಇಲ್ಲಿ ನಡೆದಿದೆ. ಬೆಟ್ಟದ ನೆಲ್ಲಿಕಾಯಿ ಇಲ್ಲಿ ಸಮೃದ್ಧವಾಗಿರುವುದು. ಇಲ್ಲಿ ಹಿಂದೆ ಬಿದಿರು ಇನ್ನೂ ತುಂಬಾ ಇದ್ದಿತ್ತೆಂಬುದಾಗಿಯೂ ಅದು ಕಾಗದ ಕೈಗಾರಿಕೆಯಿಂದ ಕಡಿಮೆಯಾಯಿತೆಂದೂ ಸ್ಥಳೀಯ ಜನರು ಹೇಳುವರು. ಸಿಂಹವಿಲ್ಲದೆ ಇದ್ದರೂ ಇನ್ನಿತರ ಪ್ರಾಣಿಗಳೆಲ್ಲವೂ ಇಲ್ಲಿದ್ದು ವಿಶೇಷವಾಗಿ ಆನೆಗಳು ಇಲ್ಲಿರುವುವು. ಈ ಬೆಟ್ಟಗಳು ಹಿಂದೆ ಬ್ರಿಟಿಷರ ಮತ್ತು ಮಹಾರಾಜರ ಬೇಟೆಯ ಸ್ಥಳವೂ ಆಗಿತ್ತೆಂಬುದಾಗಿ ತಿಳಿದುಬರುವುದು. ವಿಧವಿಧವಾದ ಹಾವುಗಳು ಈ ಅರಣ್ಯದಲ್ಲಿ ಮನೆಮಾಡಿಕೊಂಡಿರುವುವು. ಮುಸುವ ಎಂಬ ಕಪಿಯೂ ಇಲ್ಲಿ ಕಂಡು ಬಂದಿರುವುದು. ಪಕ್ಷಿಪ್ರಿಯರಿಗೆ ಇದೊಂದು ವಿಶೇಷ ಆಕರ್ಷಣೆ. ಬಗೆಬಗೆಯ ಹಕ್ಕಿಗಳು ಇಲ್ಲಿ ಮನಸ್ಸನ್ನು ತಣಿಸುವುವು. ನವಿಲುಗಳು ಗರಿಗೆದರಿ ಮನೋಹರವಾಗಿರುವುವು. "ಗಿರಿಯಲ್ಲದೆ ಹುಲ್ಲು ಮೊರಡಿಯಲ್ಲಾಡುವುದೇ ನವಿಲು?"

ಸೋಲಿಗರು ಅರೆ ಅಲೆಮಾರಿ ಜನಾಂಗವಾಗಿದ್ದರೂ ಕಳೆದ 30-40 ವರ್ಷಗಳಿಂದ ಒಂದು ಕಡೆ ನೆಲಸುವಂತಾಗಿದೆ. ಹಿಂದೆ ತಿಳಿಸಿದ ತಮ್ಮದೇ ವಲಸೆ ಮಾತ್ರವಲ್ಲದೆ, ಈ ಆದಿವಾಸಿಗಳು ಅರಣ್ಯ ಇಲಾಖೆಯಿಂದಲೂ ಅನೇಕ ಬಾರಿ ಸ್ಥಳಾಂತರಗೊಂಡಿದ್ದಾರೆ. ಈಗೀಗ ಇದು ಒಂದು ತಹಬಂದಿಗೆ ಬರುತ್ತಿರುವ ರೀತಿ ಕಂಡುಬಂದಿದೆ.

**ಪೋಡು**

ಸೋಲಿಗರು ವಾಸಮಾಡುವ ಹತ್ತಾರು ಮನೆಗಳ ವಾಸಸ್ಥಾನಕ್ಕೆ 'ಪೋಡು' ಎಂದು ಹೆಸರು. ಪೋಡಿನ ಹೆಸರುಗಳೂ ವಿಶಿಷ್ಟವಾಗಿರುತ್ತದೆ.



ಯರಕ ಮರಗಳಿದ್ದ ಸ್ಥಳವಾದ್ದರಿಂದ ಯರಕನಗದ್ದೆ, ಬಂಗ್ಲೆ ಹತ್ತಿರವಾದ್ದರಿಂದ ಬಂಗ್ಲೆ ಪೋಡು, ಕಲ್ಯಾಣಿ ಬಳಿಯಾದ್ದರಿಂದ ಕಲ್ಯಾಣಿ ಪೋಡು ಇತ್ಯಾದಿ. ಹಿಂದೆ ಬರಿಯ ಪೋಡು ಹಾಡಿಗಳಿದ್ದವು; ಇತ್ತೀಚೆಗೆ ಅರಣ್ಯ ಇಲಾಖೆ ಅಲ್ಲಲ್ಲಿದ್ದ ಆದಿವಾಸಿಗಳನ್ನು ಸೇರಿಸಿ ಕಾಲೋನಿಗಳನ್ನು ಮಾಡಿದ್ದರಿಂದ ಕೆಲವೆಡೆ ಕಾಲೋನಿಗಳೂ ಉತ್ಪತ್ತಿಯಾಗಿವೆ. ಸಾಮಾನ್ಯವಾಗಿ ಪೋಡಿನ ಹತ್ತಿರವೇ ಅದೇ ಹೆಸರಿನಲ್ಲಿ ಇದು ಇರುತ್ತದೆ. ಕಾವ್ಯಮಯ ಹೆಸರಿನ ಕನ್ನೇರಿ ಪೋಡು (ಕನ್ಯೆಯರ ಪೋಡು) ಹತ್ತಿರ ಇರುವುದು ಕನ್ನೇರಿ ಕಾಲೋನಿ.

ಯರಕನಗದ್ದೆಯ ಬಳಿ ಕಾಲೋನಿ ಮಾಡಿದಾಗ ಸೋಲಿಗ ಜನರನ್ನು ಬಲವಂತವಾಗಿ ಹೊಸ ಮನೆಗಳಿಗೆ ಸೇರಿಸಲಾಯಿತು. ಉದ್ಘಾಟನೆ ಆದ ತಕ್ಷಣವೇ ಜನ ವಾಪಸು ಪೋಡಿಗೆ ಹೋಗಿ ತಮ್ಮ ಗುಡಿಸಲುಗಳಲ್ಲಿ ತೂರಿಕೊಂಡರೆಂದು ಹಿರಿಯ ಸೋಲಿಗರು ನೆನೆಸುತ್ತಾರೆ.

ಕಾಡಿನ ಮಧ್ಯೆ ಪೋಡು ಅದೆಷ್ಟು ಮನೋಹರವಾಗಿ ಸದ್ದಿಲ್ಲದೆ ಇರುತ್ತದೆಂದರೆ ಹೊಸಬರು ಪೋಡನ್ನು ಗಮನಿಸದೆ ಹಾದು ಹೋಗಲಿಕ್ಕೂ ಸಾಕು. ಪೋಡು ಮಾಡಲು ಸ್ಥಳ ಆರಿಸುವ ಬಗ್ಗೆ ಹಿಂದೆಯೇ ವಿವರಿಸಲಾಗಿದೆ. ಇಲ್ಲಿ ಮುಖ್ಯಾಂಶಗಳೆಂದರೆ ವಾಸ ಇರಲು ಭದ್ರತೆ, ವ್ಯವಸಾಯ ಮಾಡಲು ಅವಕಾಶ. ನೀರಿನ ಸೆಲೆ, ಗೆಡ್ಡೆ ಗೆಣಸು, ಅರಣ್ಯ ಉತ್ಪನ್ನಗಳ ಸಮೃದ್ಧಿ ಮುಂತಾದವು. ನೀರಿನ ಸೆಲೆ ತುಂಬಾ ಸನಿಹದಲ್ಲಿರಬಾರದು. ಸ್ವಲ್ಪ ದೂರವಿರಬೇಕು, ಕಾಡು ಪ್ರಾಣಿಗಳನ್ನು ದೂರವಿಡುವುದಕ್ಕಾಗಿ. ಇಷ್ಟೆಲ್ಲ ಇರುವ ಸ್ಥಳಗಳಲ್ಲಿ ಅಳ್ಳುಶಾಸ್ತ್ರದ ಸಮಯ ಮಲಗಿದಾಗ, ಜಂಗಮ, ಗೊಬ್ಬರ, ಆನೆ ಅಬ್ಬರ ಒಳ್ಳೆ ಕನಸೆಂದಾದರೆ ಬೆಂಕಿ, ನೀರು ಅಪಶಕುನದ ಕನಸುಗಳೆಂದು ನಂಬುತ್ತಾರೆ.

ಇಂತಹ ಕಡೆ ಪೋಡು ಮಾಡುವ ಸೋಲಿಗರು ನಿಕಟ ಸಮುದಾಯ ಜೀವನ ನಡೆಸುವವರು. ಪೋಡು ತಮ್ಮದು, ತಾವು ಪೋಡಿನವರು ಎಂಬ

ಭಾವನೆಯಿರುವುದು. ನಾವು ಎಂದೇ ಹೇಳಿಕೊಳ್ಳುವರು. ಮುಟ್ಟು-ಮೈಲಿಗೆ ಸೂತಕಗಳಾದರೆ ಇಡೀ ಪೋಡು ಅದನ್ನು ಆಚರಿಸುವುದು, ನ್ಯಾಯ ಹಬ್ಬ ಮುಂತಾದುವೆಲ್ಲಾ ಒಟ್ಟೊಟ್ಟಿಗೆ ಆಚರಿಸುವರು.

## ಆರು ಕವ್ವೆಗಳ ಮನೆ

ಸೋಲಿಗರ ಮನೆಯೆಂದರೆ ಆರು ಕವ್ವೆಗಳನ್ನು ಉಪಯೋಗಿಸಿ ಕಟ್ಟುವ ಗುಡಿಸಲು. ನಡುವೆ ಆಳೆತ್ತರ. ಪಕ್ಕಗಳಲ್ಲಿ ಗಿಡ್ಡ, ತಡಿಕೆಗಳಿಗೆ ಮಣ್ಣು ಮೆತ್ತುವುದರ ರೀತಿಯಿಂದ ಕಟ್ಟಿದ ಮಣ್ಣಿನ ಗೋಡೆಗಳು. ಮನೆಯಲ್ಲಿ ಒಂದು ಅಡ್ಡಗೋಡೆ. ಅದೇ ಅಡುಗೆ ಮನೆ. ಮನೆಗೆ ಹುಲ್ಲಿನಛಾವಣಿ, ಒಂದು ಅಟ್ಟ. ಮನೆಯನ್ನು ಕಟ್ಟಲು ಗೆಜ್ಜಲು ತಿನ್ನದಿರುವ ಮರವನ್ನು ಉಪಯೋಗಿಸಬೇಕು. ಮಳೆ ಬಂದ ಹೊರತು ರಾತ್ರಿ ಹೊರಗೇ ಮಲಗು ತ್ತಾರೆ. ಅಲ್ಲಿ ಬೆಂಕಿ ಒತ್ತುಕೊರಡಿನ ಸಹಾಯದಿಂದ ಸದಾ ಉರಿಯು ತ್ತಿರುವುದು. ಇದು ಶಾಖಕ್ಕಾಗಿ ಮತ್ತು ಕಾಡುಪ್ರಾಣಿಗಳಿಂದ ರಕ್ಷಣೆಗಾಗಿ.

ಸಾಮಾನ್ಯವಾಗಿ ಹತ್ತಿರದಲ್ಲಿಯೇ ಸಣ್ಣವ್ಯವಸಾಯ. ಅಲ್ಲಿ ಕಾವಲು ಗುಡಿಸಲು; ಅದನ್ನು ಮರದ ಮೇಲೆ ಕಟ್ಟುವರು. ಆನೆ, ಹಂದಿ ಕಾಯಲು ಈ ಗುಡಿಸಲಿನ ಉಪಯೋಗ, ಸಮಯ ಬಿದ್ದರೆ ನೆಂಟರೂ ಇದರಲ್ಲಿ ಇರಬಹುದು.

ಪ್ರತಿ ಮನೆಯಲ್ಲಿಯೂ ರಾಗಿ ಬೀಸುವ ಕಲ್ಲು. ಅದು ರಾಗೀಯರ; ಹಾಡು ಹೇಳುತ್ತಾ ರಾಗಿ ಬೀಸುವರು. ರಾಗಿ ತುಂಬಿಡಲು ಗುಳಿ. ಅಂದರೆ ಕಣಜ. ನೆಲದಲ್ಲಿ ತೋಡಿ, ಸಗಣಿ ಸಾರಿಸಿ, ಇಲಿ ಮುಂತಾದವು ಹೋಗ ದಂತೆ ಭದ್ರ ಮಾಡಿರುವರು. ರಾಗಿಯನ್ನು ಕದಿಯುವುದು ದೊಡ್ಡ ತಪ್ಪೆಂದು ವ್ಯವಹರಿಸುವರು.

ಬುಟ್ಟಿ, ಮಡಕೆ, ಪಾತ್ರೆ ಪಡಕುಗಳನ್ನು ಓರಣವಾಗಿ ಜೋಡಿಸಿಡು ವರು. ಹಳೆಯ ಕಾಲದಲ್ಲಿ ಮಣ್ಣಿನ, ಈಗ ಕೆಲವು ಅಲ್ಯೂಮಿನಿಯಂ



ಪಾತ್ರೆಗಳು. ಈ ನಡುವೆ ಸ್ಟೀಲು ಲೋಟ ಮುಂತಾದವು ಬಂದಿರುವುದು. ಒತ್ತಾಳೆ ಬಿಂದಿಗೆಯಲ್ಲಿ ನೀರು ತುಂಬಿಡುವರು.

ಕೊಳ್ಳೆಗಾಲದ ಸೋಲಿಗರಲ್ಲಿ ಬುಟ್ಟಿ ಹೆಣೆಯುವ ಕಸುಬು ಕೆಲವ ರಲ್ಲಿದ್ದು ಕೊಳ್ಳೇಗಾಲದ ಮಾದೇಶ್ವರನ ಬೆಟ್ಟದಲ್ಲಿ ಒಮ್ಮೊಮ್ಮೆ ಇವನ್ನು ಮಾರುವರು. ಸೋಲಿಗರಿಗೆ ಸಿಗುವುದು ಅತ್ಯಲ್ಪ ಬೆಲೆಯೇ!

ಕಾಡಿನಲ್ಲಿ ಕೀಳಲು, ವ್ಯವಸಾಯ ಮಾಡಲು ಬೇಕಾಗುವ ವಸ್ತು ಗಳೆಂದರೆ ಕೊಡಲಿ, ದೋಟಿ, ಕುಡುಗೋಲು, ಕಡಕೋಳು, ದಸಿ, ಹಾರೆ; ಈ ನಡುವೆ ವ್ಯವಸಾಯಕ್ಕೆ ನೇಗಿಲನ್ನು ಕೆಲವೆಡೆ (ಸಮತಟ್ಟು ಜಾಗದಲ್ಲಿ) ಉಪಯೋಗ ಮಾಡುವರು.

## ಉಡುಪು

ಉಡುಪೆಂದರೆ, ಗಂಡಸರಿಗೆ ಮೊಣಕಾಲಿನವರೆಗಿನ ತುಂಡು ಪಂಚೆ. ಇದನ್ನು ಮುಂಡು ಎನ್ನುವರು. ಹಳೆಯ ಕಾಲದವರು ಹೊದೆಯಲು ಒಂದು ಬಟ್ಟೆ ಉಪಯೋಗಿಸುತ್ತಿದ್ದರು. ಈಗ ಶರಟನ್ನು ಹಾಕಿಕೊಳ್ಳುತ್ತಾರೆ; ಇದಕ್ಕೆ ಕವಚ ಎಂದು ಹೇಳುವರು. ಹೆಂಗಸರು ಸೀರೆ, ರವಿಕೆ ತೊಡುತ್ತಾರೆ. ಕಾಡಿನಲ್ಲಿ ಹೋಗುವಾಗ ಬಿಳಿ ಬಟ್ಟೆ ಅಥವಾ ಕೆಂಪು ಬಟ್ಟೆ ಧರಿಸಬಾರದು. ಪ್ರಾಣಿಗಳು ಕೆರಳಿ ಮೇಲೆ ಬೀಳಬಹುದು. ಹಣೆಗೆ ಕುಂಕುಮ, ವಿಭೂತಿ ಯಿಡುವರು. ಯುವತಿಯರು ಮತ್ತು ಮಕ್ಕಳಿಗೆ ಕೆನ್ನೆಯ ಮೇಲೆ ಮುದ್ದಾದ ದೃಷ್ಟಿಬೊಟ್ಟನ್ನಿಡುವರು. ಇದನ್ನು 'ಕರಳು' ಎನ್ನುವರು.

ಪೂಜಾರಿಗಳು, ದೇವರ ಕಾರ್ಯ ಮಾಡುವವರು ಅನೇಕ ವೇಳೆ ಜಟೆ ಬಿಟ್ಟಿರುವರು. ಹಳೆಯ ಕಾಲದ ಗಂಡಸರು ಹಿಂದೆ ಕೂದಲನ್ನು ಗಂಟು ಹಾಕಿಕೊಳ್ಳುವರು. ಹೊಸ ಪೀಳಿಗೆಯವರು ಕ್ರಾಪು ಮಾಡಿಸುವರು. ಹೆಂಗಸರು ಕೆಲವರು ಬಿರಿಕೂದಲನ್ನು ಬಿಟ್ಟಿದ್ದರೆ, ಈಚೆಗೆ ಜಡೆ ಹಾಕಿ,

ಹೂಗಳನ್ನು ಮುಡಿದುಕೊಳ್ಳುವರು. ಅಲ್ಪ ಬೆಲೆಯ ಆಭರಣಗಳನ್ನು ಧರಿಸುವರು. ಕಡಗ, ಓಲೆ, ಡಾಬು, ಮೂಗುತಿ, ಮುರಿ ಮುಂತಾದವು.

## ಆಹಾರ

ಆಹಾರ ಸಂಗ್ರಹಣೆ ಆದಿವಾಸಿಗಳಲ್ಲಿ ಮೊದಲಿನಿಂದಲೂ ಬಂದಿರುವ ಪದ್ಧತಿ. ಸಂಗ್ರಹಣೆ ಎಂದರೆ ಕೂಡಿಡುವುದಲ್ಲ; ಕಾಡಿಗೆ ಹೋಗಿ ಸಂಗ್ರಹಿಸಿ ತರುವುದು. ಗೆಡ್ಡೆ ಗೆಣಸುಗಳು, ಹಣ್ಣು ಕಾಯಿಗಳನ್ನು ಉಪಯೋಗಿಸುವರು. ಏಳು ತರದ ಗೆಣಸನ್ನು ಹೆಸರಿಸುವರು. ಹಲಸಿನಕಾಯಿ, ಬಿದಿರಿನ ಕಳಲೆ, ಕಾಡು ಸೊಪ್ಪುಗಳು ಮುಂತಾದವನ್ನು ತರುವರು. ಜೇನು ಬಹಳ ಪ್ರಿಯವಾದ ಆಹಾರ. ಸೋಲಿಗ ಹುಡುಗರು ಕಾಡಿಗೆ ಹೋದರೆ ಜೇನು ಸವಿ ನೋಡಿಯೇ ಬರುವರು. ಜತೆಗೆ ರಾಗಿ ಜೋಳ ಬೆಳೆಯುವರು. ರಾಗಿ ಮುದ್ದೆ ಮಾಡುವರು. ಜೋಳದ ಕಾಲದಲ್ಲಿ ಸೋಲಿಗ ಮಕ್ಕಳಿಗೆ ಜೋಳ ತಿನ್ನುವುದು ಅತ್ಯಂತ ಖುಷಿಯ ಸಮಯ.

ಮದ್ಯಪಾನ ಮಾಡಬಾರದೆಂಬ ನಿಯಮವಿರುವುದು. ಆದರೂ ನಾಡಿನವರ ಪ್ರಭಾವದಿಂದಲೋ ಸ್ವಯಿಚ್ಛೆಯಿಂದಲೋ ಕೆಲವರು ಮಾಡುವರು. ಯುವಕರಿಗೆ ಆ ಚಟಬರದಂತೆ ತಡೆಯಲು ಸಂಘ ಸಂಸ್ಥೆಗಳೂ ಶಾಲೆಗಳೂ ಸೋಲಿಗ ಯುವಕ ಸಂಘಗಳೂ ಇತ್ತೀಚೆಗೆ ಶ್ರಮವಹಿಸುತ್ತಿವೆ. ಸ್ವಲ್ಪ ಮಟ್ಟಿಗೆ ಭಂಗಿ, ಸಾಮಾನ್ಯವಾಗಿ ಬೀಡಿ ಅಭ್ಯಾಸವಿರುವುದು.

ಹಬ್ಬ ಹುಣ್ಣಿಮೆಗಳಲ್ಲಿ ವಿಶೇಷವಾಗಿ ಹಾಡು ಕುಣಿತ ಪೂಜೆಗಳು ನಡೆಯುವುದು. ರಾಗಿ ಹಬ್ಬ, ರೊಟ್ಟಿ ಹಬ್ಬ ಮುಂತಾದ ಸೋಲಿಗ ಹಬ್ಬಗಳೊಂದಿಗೆ ಸಂಕ್ರಾಂತಿ, ದೀಪಾವಳಿ, ಯುಗಾದಿ, ಗೌರಿ ಮುಂತಾದವೂ ಸೇರಿಕೊಂಡಿವೆ. ಸಂಕ್ರಾಂತಿಯಲ್ಲಿ ಕಟ್ಟುಗಾವಲು, ಅಂದರೆ ಮನೆಗಳ ಮುಂದೆ ವಿಶೇಷ ರಂಗೋಲಿ ಹಾಕಿ, ಜೋಗಿ ವೇಷದೊಡನೆ ಬರುವ ಕುಣಿತ ಮಾಡುವ ಯುವಕರಿಗೆ ಉಲಾವು ಕೊಡುವರು. ಇದು ನೋಡಲು



ಅತಿ ಮನೋಹರ. ಗೋರು ಗೋರುಕಾನ ಕುಣಿತ ಮಾಡುವರು. ಸೋಲಿಗ ವಾದ್ಯಗಳೆಂದರೆ ಕೊರಳು, ಪಿನಾಸಿ, ತಮಟೆ; ಇವುಗಳನ್ನು ಸೋಲಿಗರೇ ತಯಾರಿಸುವರು.

## ಸೋಲಿಗ ವ್ಯವಸಾಯ

ಸೋಲಿಗರಿಗೆ ವ್ಯವಸಾಯವೆಂದರೆ ಪ್ರಾಣ. ಎಂತಹ ಬಡವನೂ ಸ್ವಲ್ಪವಾದರೂ ವ್ಯವಸಾಯ ಮಾಡಿ ರಾಗಿ ಜೋಳ ಬೆಳೆದು ಒಂದು ಹಬ್ಬ ಮಾಡಿ, ತನ್ನವರಿಗೆ ಸ್ವಲ್ಪ ರಾಗಿ ಮುಂತಾದವನ್ನು ಕೊಟ್ಟಾಗಲೇ ಅವನಿಗೆ ತೃಪ್ತಿ. ಈ ವ್ಯವಸಾಯವನ್ನು ಕಳಕೋಟ್ಲು ವ್ಯವಸಾಯವೆಂದು ಕರೆಯುವರು. ಬಹಳ ಏರು ತಗ್ಗುಗಳಲ್ಲಿ ನೇಗಿಲು ಉಪಯೋಗಿಸಲು ಆಗುವುದಿಲ್ಲವಾದರೂ ಸಮತಟ್ಟಿನಲ್ಲಿ ಕೆಲವೆಡೆ ಉಪಯೋಗ ಮಾಡುವರು. ಹಗಲು ರಾತ್ರಿ ಕಾವಲು ಮಾಡಬೇಕು. ಗಂಡ ಹೆಂಡತಿ ಮಕ್ಕಳು ಸರದಿಯ ಮೇಲೆ ಕಾವಲು ಕಾಯುವರು. ಸಾಕಷ್ಟು ಭಾಗ ಆನೆ, ಹಂದಿ ಪಾಲಾಗುವುದು. ಮಿಕ್ಕ ಧಾನ್ಯದಲ್ಲಿ ಹಬ್ಬ, ಕೊಡುಗೆ ಇವೆಲ್ಲ ಮಾಡುವರು. ಆದ್ದರಿಂದ ಒಬ್ಬರು ವ್ಯವಸಾಯ ತಜ್ಞರು ಹೀಗೆ ವಿವರಿಸಿದರು: "ಸೋಲಿಗ ವ್ಯವಸಾಯ ಪರಿಸರಕ್ಕೆ ಹತ್ತಿರ; ನಾಡಿನವರ ವ್ಯವಸಾಯ ಆರ್ಥಿಕತೆಯ ಮೂಲವನ್ನು ಒಳಗೊಂಡಿದೆ" ಎಂಬುದಾಗಿ. (Tribal agriculture is more ecological. Non tribal agriculture is more economical). ರಾಗಿ ಜೋಳ ಮಾತ್ರವಲ್ಲದೆ ಸೋಲಿಗರು ಅವರೆ, ಹುರುಳಿ, ಹರಳು, ಸಾಸಿವೆ, ತೊಗರಿ ಮುಂತಾದವನ್ನು ಬೆಳೆಯುವರು. ಕೆಲವು ಕಡೆ ಆನೆಗಳ ಹಾವಳಿಯಿಂದ ರಕ್ಷಣೆಯಿದ್ದರೆ, ಬಾಳೆಯನ್ನು ಬೆಳೆಯುವರು. ಸೋಲಿಗ ಬೊಮ್ಮಯ್ಯನು ಯಥೇಚ್ಛವಾಗಿ ಬಾಳೆ ಮುಂತಾದವನ್ನು ಬೆಳೆಯುತ್ತಿದ್ದನೆಂದು ಕತೆಯಲ್ಲಿ ಬರುವುದು. ಇದು ಅವರ ಆಂತರಿಕ ಆಸೆಯನ್ನು ಪ್ರತಿಬಿಂಬಿಸುವುದು.

ಕಾಳು ಹಾಲು ಕಟ್ಟುವ ಸಮಯದಲ್ಲಿ ಹಕ್ಕಿಗಳಿಂದಲೂ ಪೈರನ್ನು ರಕ್ಷಿಸ ಬೇಕು. ಇದಕ್ಕಾಗಿ ಬೆದರು ಗೊಂಬೆ ಕಟ್ಟುವರು. ಕೂಗಿ ಹಕ್ಕಿ ಓಡಿಸುವರು ಮತ್ತು ಕವಣೆಯನ್ನು ಉಪಯೋಗಿಸುವರು.

## ಪುರಾತನ ಕಾಲದಲ್ಲಿ ಪ್ರಾಣಿಬೇಟೆ

ಮುನ್ನಿನ ಕಾಲದಲ್ಲಿ ಹಂದಿ ಮುಂತಾದ ಪ್ರಾಣಿಗಳನ್ನು ಬಲೆ, ಕುಣಿಕೆ ಹಾಕಿ ಹಿಡಿದು ಆಹಾರಕ್ಕೆ ಉಪಯೋಗಿಸುತ್ತಿದ್ದರೆಂದು ತಿಳಿದುಬರುತ್ತದೆ. "ಇಂದು ಹೋದ ದಾರಿಯಲ್ಲಿ ನಾಳೆ ಹೋಗಬೇಡಿ! ಮಾಯದಾ ಬಲೆ ಮಡಗಿದದೆ" ಎಂದು ಹಂದಿ ಮಕ್ಕಳಿಗೆ ಬುದ್ಧಿ ಹೇಳುತ್ತದೆ. ಸಿಡಿಮದ್ದನ್ನು ರಾಗಿ ಹಿಟ್ಟಿನಲ್ಲಿ ಹಾಕಿ ಇಡುತ್ತಿದ್ದ, ಗುಂಡಿ ತೋಡಿ ಖೆಡ್ಡಾ ರೀತಿ ಹಿಡಿಯುತ್ತಿದ್ದ ವಿಚಾರವೂ ನಮಗೆ ತಿಳಿದುಬರುತ್ತದೆ. ಈಗ ಅರಣ್ಯ ಕಾಯಿದೆಗಳು ಬಂದಿರುವುದರಿಂದ ಇದು ನಡೆಯುತ್ತಿರುವುದಿಲ್ಲ. ಆದರೆ ಯಾವುದಾದರೂ ಪ್ರಾಣಿ ತಾನೆ ತಾನಾಗಿ ಕೊಲ್ಲಲ್ಪಟ್ಟಿದ್ದರೆ ಪಾಲು ಹಾಕಿ ಕೊಳ್ಳುವುದು ರೂಢಿಯಲ್ಲಿದೆ. ಮೀನು ಹಿಡಿಯುವುದು, ಮತ್ತು (ಅಮಲು) ಬರಿಸುವ ಚಕ್ಕೆ ಹಾಕಿ ಮೀನನ್ನು ತೇಲುವಂತೆ ಮಾಡಿ ಹಿಡಿಯುವುದು ಮಾಡುತ್ತಿದ್ದರೆಂದು ತಿಳಿದುಬರುವುದು.

## ಕಿರು ಅರಣ್ಯ ಉತ್ಪನ್ನಗಳು

ವ್ಯವಸಾಯವಿಲ್ಲದ ಕಾಲಗಳಲ್ಲಿ ಸೋಲಿಗರು ಕಿರು ಅರಣ್ಯ ಉತ್ಪನ್ನ ಗಳನ್ನು ಸಂಗ್ರಹಿಸುತ್ತಾರೆ. ಹಿಂದಿನ ಕಾಲದಲ್ಲಿ ಸ್ವಾರ್ಥಿ ಕಂಟ್ರಾಕ್ಟರುಗಳು ಗುತ್ತಿಗೆ ಹಿಡಿದು ಸೋಲಿಗರಿಂದ ಚೆನ್ನಾಗಿ ಕೆಲಸ ಮಾಡಿಸಿ ಅತ್ಯಲ್ಪ ಬೆಲೆಯನ್ನು ಕಿರು ಅರಣ್ಯ ಉತ್ಪನ್ನಗಳಿಗೆ ಕೊಟ್ಟು ಅವನ್ನು ಕೊಂಡು ತಾವು ಹೆಚ್ಚಿನ ಬೆಲೆಗೆ ಮಾರಿ ಯಥೇಚ್ಛವಾಗಿ ಲಾಭ ಮಾಡುತ್ತಿದ್ದರು. ಸೋಲಿಗರ ಮೇಲೆ ಕೈ ಮಾಡುವುದು, ಅವರ ಅಜ್ಞಾನವನ್ನು ದುರುಪಯೋಗ ಮಾಡಿ ಕೊಳ್ಳುವುದು ಅವ್ಯಾಹತವಾಗಿ ನಡೆಯುತ್ತಲೇ ಇತ್ತು. ಈಗ ಪರಿಸ್ಥಿತಿ



ಬದಲಾಗಿದೆ. ಕಂಟ್ರಾಕ್ಟರುಗಳುಗಳ ಕಾಲ ಮುಗಿದು 'ಲ್ಯಾಂಪ್' ಅಂದರೆ 'ಗಿರಿಜನ ವಿವಿಧೋದ್ದೇಶ ದೊಡ್ಡ ಪ್ರಮಾಣದ ಸಹಕಾರ ಸಂಘ'ಗಳು ರಚನೆಗೊಂಡು ಗಿರಿಜನ ಕಿರು ಅರಣ್ಯ ಉತ್ಪನ್ನ ಸಂಸ್ಕರಣ ಸಂಘಗಳೂ ಅಸ್ತಿತ್ವಕ್ಕೆ ಬಂದು, ಲಾಭವು ಗಿರಿಜನರಿಗೇ ಸಿಗುವಂತಾಗಿದೆ. ಸಂಸ್ಕರಣದ ಮೂಲಕ ಉತ್ಪನ್ನಗಳಿಗೆ 'ಮೌಲ್ಯಸೇರ್ಪಡೆ' ಮಾಡಿದಾಗ ಬರುವ ಅಧಿಕ ಲಾಭವು ಈಗ ಕಷ್ಟಪಡುವ ಗಿರಿಜನರಿಗೇ ಸಿಗುವುದು. ಅವರೆಲ್ಲರೂ ಈ ಸಂಘದ ಸದಸ್ಯರಾಗಿರುತ್ತಾರೆ. ಈ ಲಾಭವನ್ನು ಸಂಘದ ಬಲಪಡಿಸು ವಿಕೆಗೆ, ಎಳೆಯರ ವಿದ್ಯಾಭ್ಯಾಸಕ್ಕೆ ಮುಂತಾಗಿ ಉಪಯೋಗವಾಗುತ್ತಿದೆ. ಕಿರು ಅರಣ್ಯ ಉತ್ಪನ್ನಗಳಲ್ಲಿ ಮುಖ್ಯವಾದುವೆಂದರೆ ಜೇನು, ನೆಲ್ಲಿಕಾಯಿ, ಇನ್ನಿತರ ವಸ್ತುಗಳು ಜೇನು ಮೇಣ, ಅಳಲೇಕಾಯಿ, ಪಾಸೆ, ಅಂಟುವಾಳ, ಕಡವೆ ಕೊಂಬು ಮುಂತಾದವು.

ಸೋಲಿಗರು ಪಶು ಸಂಗೋಪನೆ ಮಾಡುತ್ತರಾದರೂ ಮೇಕೆ ಸಾಕು ವುದು ಇತ್ಯಾದಿ ಮಾಡುವುದಿಲ್ಲ. ನಾಟೀ ಹಸುಗಳು ಕಾಡಿಗೆ ಒಗ್ಗುತ್ತವೆ. ಪ್ರಾಣಿ ಸಾಕುವುದರಲ್ಲಿ ಅನೇಕರ ಪಶುಗಳನ್ನು ಸೇರಿಸಿ ಮೇಯಿಸಿ ವಾಪಸು ತರುವ ಪದ್ಧತಿಯೂ ಇದೆ. ಕೆಲವು ಉದ್ಯಮಿ ಸೋಲಿಗರು ರೇಷ್ಮೆ ಕೃಷಿ ಮಾಡುವುದೂ ಇದೆ. ಇದಕ್ಕೆ ಬೇಕಾದ ಪರಿಕರಗಳನ್ನು ಸರ್ಕಾರದಿಂದ ಪಡೆದುಕೊಂಡಿರುತ್ತಾರೆ.

ಈ ಜನರಲ್ಲಿ ಮೊದಲಿಗೆ 'ಸಾಟಿ' ಪದ್ಧತಿ ಇದ್ದಂತೆ ಕಾಣುತ್ತದೆ. ಈಗ ಸಾಮಾನ್ಯವಾಗಿ ಎಲ್ಲ ಹಣಕಾಸಿನಲ್ಲಿಯೇ ನಡೆಯುತ್ತಿದೆ. ಕೊಟ್ಟು ತೆಗೆದು ಕೊಳ್ಳುವ ಯಾವುದೇ ವ್ಯವಹಾರದಲ್ಲಿ ನಷ್ಟ ಸೋಲಿಗನಿಗೇ ಆಗುತ್ತದೆ. 'ಬುದ್ಧಿವಂತ' ನಾಡವರು ಬಿಗಿಮುಷ್ಟಿಯವರು. ಸಾಕಷ್ಟು ಕಾಲ ಸೋಲಿಗ ರಿಗೆ ಈ ರೀತಿ ಶೋಷಣೆಯಾಗಿದೆ. ಜಾತ್ರೆ ಸಮಯದಲ್ಲಿ ಸೋಲಿಗರು ವ್ಯಾಪಾರ ಮಾಡಿ ತಮಗೆ ಬೇಕಾದ ಚಿಣಿಮಿಣಿ ವಸ್ತುಗಳನ್ನು ಕೊಳ್ಳುತ್ತಾರೆ.

ದಿನನಿತ್ಯದ ವಸ್ತುಗಳನ್ನು ವಾರಕ್ಕೊಮ್ಮೆ ಯಳಂದೂರಿನಿಂದ ತರುವ ರೂಢಿಯೂ ಇದೆ. ಬೇಕಾದಾಗ ನಗರ (ಚಾಮರಾಜನಗರ), ಕೊಳ್ಳೇಗಾಲ ಗಳಿಗೂ ಹೋಗುವರು.

ಸೋಲಿಗರಲ್ಲಿ ಬಹಳವಾಗಿ ಆಸ್ತಿಗಳಿರುವುದಿಲ್ಲ. ಆದ್ದರಿಂದಲೇ ಮನೆಗೆ ಬೀಗ ಹಾಕುವುದೂ ಆವಶ್ಯಕತೆಯಿಲ್ಲ. ಸಾಮಾನ್ಯವಾಗಿ ಗಂಡುಮಕ್ಕಳಿಗೆ ಆಸ್ತಿ ಬರುವುದಾದರೂ ಎರಡು ಸಂದರ್ಭಗಳಲ್ಲಿ ಹೆಣ್ಣುಮಕ್ಕಳಿಗೆ ತನ್ಮೂಲಕ ಅವರ ಗಂಡಂದಿರಿಗೆ ಆಸ್ತಿ ಬಂದುದನ್ನು ಈ ಲೇಖಕರು ಗಮನಿಸಿದ್ದಾರೆ. ಅಲ್ಪ ಬೆಲೆಯ ಕೆಲವೇ ಆಭರಣಗಳನ್ನು ಸೋಲಿಗರು ಧರಿಸುವರು ಎಂದು ಹಿಂದೆ ಹೇಳಲಾಗಿದೆ. ಇತ್ತೀಚೆಗೆ ಸೋಲಿಗರು ಒಂದು ರೇಡಿಯೋವನ್ನು ಆಸೆಯಿಂದ ಇಟ್ಟುಕೊಳ್ಳುವುದು ಕಂಡುಬಂದಿದೆ. ಇನ್ನೂ ದೂರದರ್ಶನದ ದಾಳಿ ಆಗಿಲ್ಲವಾದರೂ ತಕ್ಕಮಟ್ಟಿಗೆ ದೂರದರ್ಶನ ಇರುವವರ (ನಾಡವರ) ಮನೆಗಳಿಗೇ ಹೋಗಿ ಅಲ್ಲಿ ನೋಡಿ ಬರುವುದು ರೂಢಿಯಾಗಿದೆ. ಯಳಂದೂರಿಗೆ, ನಗರಕ್ಕೆ (ಚಾಮರಾಜನಗರ) ಹೋದಾಗ ಚಲನಚಿತ್ರ ನೋಡಿ ಬರುವುದೂ ಉಂಟು.

## ಆರೋಗ್ಯ

ಆರೋಗ್ಯ ವಿಚಾರದಲ್ಲಿ ಇತರ ಸಮುದಾಯದವರು ಕಾಡಿನಲ್ಲಿ ಒಳಗಾಗುವ ಎಲ್ಲ ಪರಿಸ್ಥಿತಿಗಳಿಗೆ ಸೋಲಿಗರು ಒಳಗಾಗುತ್ತಾರೆ. ಕಾಡನ್ನು ಬಿಟ್ಟವರು, ತೀರ ಅಂಚಿಗೆ ಬಂದಿರುವವರು ಪೌಷ್ಟಿಕಾಂಶಗಳಲ್ಲಿ ಸ್ವಲ್ಪ ನ್ಯೂನವಾಗಿದ್ದಾರೆಂದು ಇಲ್ಲಿ ಕೆಲಸ ಮಾಡುವ ಡಾಕ್ಟರುಗಳ ಅಭಿಪ್ರಾಯ. ಇದಕ್ಕೆ ಕಾರಣ ಅನೇಕ ತರದ ಸೊಪ್ಪು, ಹಸಿರುಗಳು, ಗೆಡ್ಡೆ ಗೆಣಸುಗಳು ಕಾಡಿನ ಒಳಗೆ ಲಭ್ಯವಿರುವಂತೆ ಬೇರೆ ಕಡೆ ಇಲ್ಲದಿರುವುದೇ ಎಂಬುದಾಗಿ ಅವರು ಹೇಳುತ್ತಾರೆ. ಜಂತುಹುಳು ಮುಂತಾದವುಗಳ ಇರುವಿಕೆ ಸಾಕಷ್ಟು ಕಂಡು ಬಂದಿದ್ದು ಮಕ್ಕಳಿಗೆ ಅದು ಬಾರದಂತೆ ಔಷಧಿಗಳನ್ನು ನಮ್ಮ



ಆಸ್ಪತ್ರೆಗಳಲ್ಲಿ ಕೊಡಲಾಗುತ್ತಿದೆ. ಒಟ್ಟೊಟ್ಟಿಗೆ ಮಲಗುವುದರಿಂದಲೂ ಬಟ್ಟೆ ಗಳನ್ನು ಉಪಯೋಗಿಸುವುದರಿಂದಲೂ ಕಜ್ಜಿ ಮುಂತಾದವು ಬರುವ ಸಾಧ್ಯತೆ ಸಾಕಷ್ಟಿದೆ. ಕೆರೆಯಲ್ಲಿ ಸ್ನಾನ ಮಾಡುವುದರಿಂದಲೂ ಕೆಲವು ಬಾರಿ ಕೆಲವು ಮಕ್ಕಳಿಗೆ ಒಗ್ಗದಿದ್ದು ಅವರು ಕೊಳವೆ ಬಾವಿಯನ್ನು ಹೆಚ್ಚು ಇಷ್ಟಪಡುತ್ತಾರೆ.

ನೈರ್ಮಲ್ಯದ ಕೊರತೆಯಿಂದಾಗಿ ಉಂಟಾಗುವ ಈ ಕೆಲವು ಸಮಸ್ಯೆ ಗಳನ್ನು ಬಿಟ್ಟರೆ ಸೋಲಿಗರ ಸಾಮಾನ್ಯ ಆರೋಗ್ಯ ಚೆನ್ನಾಗಿದೆಯೆಂದೇ ಹೇಳಬಹುದು. ಅವರು ಉಪಯೋಗಿಸುವ ಹಸಿರು ಔಷಧಿಗಳು, ಚಕ್ಕೆ ಲೇಪನಗಳು ಅವರನ್ನು ಅನಾದಿ ಕಾಲದಿಂದಲೂ ಆರೋಗ್ಯದಲ್ಲಿ ಇಟ್ಟಿದೆ. ಈ ನಾರು ಬೇರು ಔಷಧಿ ಪದ್ಧತಿಯು ವಿಶೇಷವಾಗಿ ಕೆಲವರಲ್ಲಿ ವಂಶಪಾರಂಪರ್ಯವಾಗಿ ಬಂದರೂ ಅತಿ ಸಾಮಾನ್ಯ ಜನರಿಗೂ, ಯುವಕರಿಗೂ ಸಹ ಸಾಕಷ್ಟು ಔಷಧ ವಿಚಾರಗಳು ಗೊತ್ತಿದೆ. ಸೋಲಿಗರು ಜನನ ನಿಯಂತ್ರಣದ ಔಷಧಿಗಳು ತಮಗೆ ಗೊತ್ತಿದೆಯೆಂದು ಹೇಳುತ್ತಾ ರಾದರೂ ಈ ದಿಸೆಯಲ್ಲಿ ಇನ್ನೂ ಸಂಶೋಧನೆಯಾಗಬೇಕಾಗಿದೆ.

ಸೋಲಿಗರು ನಾರು ಬೇರು ಔಷಧಿ ಮಾಡಿಸಿದರೂ ಖಂಡಿತವಾಗಿ ದೇವರನ್ನು ಕೇಳದೆ ಬಿಡುವುದಿಲ್ಲ. ದೇವರು ದಿರೆಯ (ಧೈರ್ಯ) ಹೇಳಿ, ವಿಭೂತಿ ಮಂತ್ರಿಸಿ ಕೊಟ್ಟರೆ ಆಗ ಖಂಡಿತ ಗುಣ! ಈ ವಿಭೂತಿ ಚಿಕಿತ್ಸೆ ಬಹಳ ಒಳ್ಳೆಯ ಆತ್ಮವಿಶ್ವಾಸ ನಿರ್ಮಾಣದ ಸಾಧನವಾಗಿರುವುದು. ಬೇರೆಯೆ ಪರಿಣಾಮಗಳೂ ಆಗಿ ಖಾಯಿಲೆಗಳು ಗುಣವಾಗುವುವು.

ಸೋಲಿಗ ಆದಿವಾಸಿಗಳಲ್ಲಿ 'ಸಿಕಲ್ ಸೆಲ್ ಅನಿಮಿಯಾ' ಎಂಬ ವಂಶವಾಹಿನಿ ಖಾಯಿಲೆಯಿರುವುದು. ಇದರ ಪರಿಣಾಮ ರಕ್ತಹೀನತೆ, ಮಂಡಿನೋವು, ಆಯುಷ್ಯ ಪ್ರಮಾಣ ಕಡಿಮೆಯಾಗುವುದು ಇತ್ಯಾದಿ. ಇದಕ್ಕೆ ಪರಿಹಾರವೆಂದರೆ ರಕ್ತ ಸಂಬಂಧ ಬೆಳೆಸುವಾಗ ಇಬ್ಬರೂ ಸಿಕಲ್ ಸೆಲ್ ಇರುವವರು ಆಗಬಾರದು. ಮದುವೆ ಸಲಹೆಯೇ ಮಾರ್ಗ. ಆದರೆ

ತಕ್ಷಣಕ್ಕೆ ಈ ಜ್ಞಾನದ ಕೊರತೆಯಿರುವುದರಿಂದ ಹಳೆಯ ರೀತಿ ಮದುವೆಗಳಾಗುತ್ತಲೇ ಇವೆ. ಆದರೂ ವಿದ್ಯಾವಂತ ಯುವಕರಿಗೆ ಇದನ್ನು ಪರಿಚಯಿಸಲು ಸ್ವಲ್ಪ ಮಟ್ಟಿಗೆ ಆಗಿದೆ.

## ವಿಸ್ಮಯಕಾರಿ ಹೆರಿಗೆ ಪದ್ಧತಿ

ಡಾಕ್ಟರುಗಳನ್ನು ವಿಸ್ಮಯಗೊಳಿಸಿರುವ ಒಂದು ಸಂಗತಿಯೆಂದರೆ ಸೋಲಿಗರ ಕುತೂಹಲಕಾರಿ ಹೆರಿಗೆ ಪದ್ಧತಿ. ಇದುವರೆವಿಗೂ ಒಂದಾದರೂ ಶಸ್ತ್ರಚಿಕಿತ್ಸೆಯಿಲ್ಲದೆ ಸಾವಿರಾರು ಹೆರಿಗೆಗಳನ್ನು ಸೋಲಿಗರ ಸಿದ್ದಮ್ಮ ಮತ್ತು ಅಂತಹ ಕೆಲವು ಮಹಿಳೆಯರು ಮಾಡಿಸಿದ್ದಾರೆ. ಮಲಗಿಸಿ ಮಾಡುವುದು ನಾಡಕಡೆ ಹಾಗೂ ಡಾಕ್ಟರುಗಳ ಪದ್ಧತಿಯಾದರೆ, ಕೂಡಿಸಿ ಹೆರಿಗೆ ಮಾಡುವುದು ಸೋಲಿಗರ ಪದ್ಧತಿ. ಇದು ಈಗ ವೈಜ್ಞಾನಿಕವಾಗಿಯೂ ಸ್ವೀಕೃತವಾಗಿರುವುದಷ್ಟೆಯಲ್ಲ, ಒಳ್ಳೆಯ ಪದ್ಧತಿ ಎಂದು ಹೇಳಲ್ಪಟ್ಟಿದೆ. ಅಷ್ಟೆಯಲ್ಲದೆ ಮಗುವನ್ನು ತಿರುಗಿಸುವಿಕೆ (versions) ಮುಂತಾದವನ್ನು ಚೆನ್ನಾಗಿ ಮಾಡಿರುವುದರಿಂದ ಒಂದಾದರೂ ಉಲ್ಲಂಘಿತ ಹೆರಿಗೆ (breach birth) ಇದುವರೆವಿಗೂ ಆಗಿರುವುದಿಲ್ಲ. ಸಂಶೋಧಕರು ಇದನ್ನೆಲ್ಲ ಅಭ್ಯಸಿಸಿ ಸಂಶೋಧನೆ ನಡೆಸುವ ಆವಶ್ಯಕತೆಯಿದೆ.

ಹೊಕ್ಕಳ ಬಳ್ಳಿಯನ್ನು ಕುಡುಗೋಲು ಅಥವಾ ಹರಿತ ಬಿದಿರಿನಿಂದ ಕತ್ತರಿಸಿ ಅದನ್ನು ಹೂಳುವರು. ಅದು ಪ್ರಾಣಿಗಳ ಪಾಲಾಗಕೂಡದು. ಹಾಗೆ ನೋಡಿಕೊಳ್ಳುವರು. ಏಕೆಂದರೆ ಹೊಕ್ಕಳ ಬಳ್ಳಿ ಪ್ರಾಣಿಗಳ ಪಾಲಾಗುವುದು ಕೆಟ್ಟ ಶಕುನ.

## ನಾಮಕರಣ

ಸೋಲಿಗರಲ್ಲಿ ಮಗುವಾದಾಗ ದೇವರುಗಳಿಗೆ ಪ್ರಾರ್ಥನೆ ಸಲ್ಲುವುದು. ತಾಯಂದಿರು ದೀರ್ಘಕಾಲ ಎದೆ ಹಾಲು ಕೊಡುವರು. ಎಲ್ಲೆಡೆ ಅದು ಸುಮಾರು ಒಂದು ವರ್ಷವಾದರೆ ಇಲ್ಲಿ 2-2½ ವರ್ಷಗಳವರೆಗೂ



ಕೊಡುವ ಸಂದರ್ಭವೂ ಇದೆ. ಗಂಡು ಮಗುವಾದರೆ ನಾಲ್ಕನೇ ದಿವಸ ಹೆಣ್ಣುಮಗುವಾದರೆ ಐದನೆಯ ದಿವಸ ಹೆಸರಿಡುವರು. 12ನೇ ದಿವಸ ಕಿವಿ ಚುಚ್ಚುವುದೂ ಹೆಣ್ಣು ಮಗುವಾದರೆ 7-8ನೇ ವಯಸ್ಸಿನಲ್ಲಿ ಮೂಗು ಚುಚ್ಚುವ ಪದ್ಧತಿಯಿದೆ.

## ಮೈ ನೆರೆಯುವುದು

ಹೆಣ್ಣು ಮಗು ಮೈ ನೆರೆದರೆ ಐದು ದಿನ ಮೈಲಿಗೆಯಿರುವುದು. ದಡಸು ಮತ್ತು ಬೆಂಡೇ ಕಟ್ಟಿಗೆಗಳಿಂದ ಒಂದು ಹಸಿರು ಗುಡಿಸಲನ್ನು ಕಟ್ಟುವರು. ಇದಕೆ 'ಗುಮ್ಮಿ' ಎನ್ನುವರು ಇಲ್ಲಿ ಮೈ ನೆರೆದ ಹೆಣ್ಣು ಹಿರಿಯ ಮಹಿಳೆಯರ ರಕ್ಷಣೆಯಲ್ಲಿ ಐದು ದಿನ ವಾಸಿಸುವಳು. ಐದನೇ ದಿನದ ಸ್ನಾನದ ನಂತರ ಈ ಗುಡಿಸಲನ್ನು ಸುಟ್ಟು ಹಾಕುವರು. ಒಸಗೆ ಹಿಟ್ಟು ಆಚರಿಸಿ (ಪೋಡಿನ ಎಲ್ಲರಿಗೂ ಊಟ) ಹೆಣ್ಣಿಗೆ ಹೊಸ ಸೀರೆ, ರವಿಕೆ ಕೊಡುವರು. ಹೆಣ್ಣು ಮಗಳ ತೊಡೆಯ ಮೇಲೆ ಚಿಕ್ಕ ಮಕ್ಕಳನ್ನು ಕೂಡಿಸುವ ಶಾಸ್ತ್ರ ಮಾಡುವರು. ಇದರಿಂದ ಅವಳಿಗೆ ಮಕ್ಕಳ ಫಲದ ಭಾಗ್ಯ ಬರುವುದು ಎಂದು ನಂಬಿಕೆ.

ಮುಟ್ಟಿನವರು ಎರಡು ದಿನ ಬೇರೆಡೆ ಮನೆಯಿಂದ ಹೊರಗೆ ವಾಸಿಸಬೇಕು. ಇದಕ್ಕಾಗಿ ಬೇರೆ ಗುಡಿಸಲು ಕಟ್ಟಿಯೋ, ಯಾವುದಾದರೂ ಖಾಲಿಯಿದ್ದರೆ ಅಲ್ಲಿಯೇ ಇರುವರು. ಮಾರನೇ ದಿನ ಸ್ನಾನದ ನಂತರವೇ ಶುದ್ಧಿ. ಈ ಸಂದರ್ಭದಲ್ಲಿ ಅವರು ಹೊಲ ಗದ್ದೆಗಳಿಗೆ ಹೋಗಬಾರದು. ಆನೆ ಬರುತ್ತದೆಂಬ ನಂಬಿಕೆ. ಹಾಗೆಯೇ ಅವರು ಜೇನುಗೂಡನ್ನು ಮುಟ್ಟಬಾರದು. ಅವರನ್ನು ಭೂತಗಾಳಿಗಳು ತಾಕದಂತೆ ಎಚ್ಚರವಹಿಸುವರು.

## ಸೋಲಿಗ ವಿವಾಹ

ಸೋಲಿಗ ಗಿರಿಜನರು ಹಿಂದೆ ತಮ್ಮಲ್ಲಿ ನಾಲ್ಕು ತರದ ಮದುವೆಗಳಿದ್ದವೆಂದು ಹೇಳುತ್ತಾರೆ. ಮೊದಲನೆಯದು ಬಲವಂತ ವಿವಾಹ.

ಇದೊಂದು ರೀತಿ ರಾಕ್ಷಸ ವಿವಾಹ. ಗಂಡು ತಾನು ಇಷ್ಟಪಟ್ಟ ಹುಡುಗಿಯನ್ನು ಬಲವಂತವಾಗಿ ಕೊಂಡೊಯ್ದು ಮದುವೆಯಾಗುವುದು. ಬಹುಶಃ ನಾಡ ಸಂಸ್ಕೃತಿಯಲ್ಲಿ ಕಾಣಸಿಗುವ ಈ ರೀತಿ ಉದಾಹರಣೆಗಳಿಗೆ ಮೂಲ ವನಸಂಸ್ಕೃತಿಗಳಲ್ಲಿದ್ದಂತೆ ಕಾಣುತ್ತದೆ. ಅಂತೂ ಈಗ ಈ ಸಂಪ್ರದಾಯ ಇರುವುದಿಲ್ಲ.

ಎರಡನೆಯದು ಹೆಣ್ಣು-ಗಂಡು ಕಡೆಯವರು ಮಾತನಾಡಿ ನಿಷ್ಕರ್ಷಿಸುವ ವಿವಾಹ. ನಾಡಸಂಸ್ಕೃತಿಯಲ್ಲಿ ಇದೇ ಪ್ರಚಲಿತವಿರುವುದಾದರೂ, ಅಲ್ಲಿನ ಬಲವಂತಗಳಂತೆ ಸೋಲಿಗ ಗಿರಿಜನರಲ್ಲಿ ಇರುವುದಿಲ್ಲ. ಬದಲಿಗೆ ಹುಡುಗ ಹುಡುಗಿಯರು ಸಾಮಾನ್ಯವಾಗಿ ಇಷ್ಟಪಡುವುದನ್ನೇ ಗಮನಿಸಿ ಈ ನಿಷ್ಕರ್ಷೆಗಳು ನಡೆಯುತ್ತವೆ. ಈ ಲೇಖಕರು ಗಮನಿಸಿದ ಒಂದು ಸಂದರ್ಭದಲ್ಲಿ ಹುಡುಗಿ ಇಷ್ಟಪಡದಿದ್ದರೂ ಮದುವೆಯಾದಾಗ ಅವಳು ವಾಪಸು ಬಂದು, ಕೆಲ ತಿಂಗಳ ನಂತರ ಅವಳನ್ನು ಬೇರೆ ಹುಡುಗನಿಗೆ ಕೊಟ್ಟು ಮದುವೆ ಮಾಡಲಾಯಿತು. ಇದಕ್ಕೆ ಯಾರದು ಏನೂ ಅಭ್ಯಂತರವಿರಲಿಲ್ಲ. ಒಮ್ಮೊಮ್ಮೆ ಈ ವ್ಯವಸ್ಥಿತ ಮದುವೆಗಳು, ನಾಡವರನ್ನು ನೋಡಿಕೊಂಡು ಅವರಿಗಿಂತ ದೊಡ್ಡ ಮೈಕು ಸೆಟ್ಟು ಬಾಜಾ ಭಜಂತ್ರಿಗಳನ್ನೇರ್ಪಡಿಸುವ ಕಡೆ ಹೊರಳುತ್ತಿದೆ. ಒಂದು ವಿಧದಲ್ಲಿ ಇದು ಆವಶ್ಯಕವಿಲ್ಲದ ಬೆಳವಣಿಗೆ. ಸಾಲಗಾರರಾಗಲು ಮಾರ್ಗ. ಸರಳವಾಗಿ ನಡೆಯುವ ಮದುವೆಗಳು ಸುಂದರ. ಸಂಸ್ಕೃತಿ ಪರಂಪರೆಯ ದ್ಯೋತಕ. ಸೋಲಿಗರಲ್ಲಿ ಹೆಣ್ಣಿನವರ ಮೇಲೆ ಭಾರ ಬೀಳುವುದಿಲ್ಲ. ಗಂಡೇ ಸೀರೆಯನ್ನು ತಂದು ನಮ್ರತೆಯಿಂದ ಮದುವೆಯಾಗಬೇಕು.

1980-2000ದ ಎರಡು ದಶಕಗಳಲ್ಲಿಯೂ ಈ ಲೇಖಕರು ಗಮನಿಸಿದ ಹೆಚ್ಚಿನ ಸಂಖ್ಯೆ ವಿವಾಹಗಳೇ ಪ್ರೇಮ ಪರಾರಿ. ಇದೊಂದು ರೀತಿ ಕಾವ್ಯಮಯ. ಹುಡುಗ ಹುಡುಗಿ ಆಗಾಗ ಸಂಧಿಸುತ್ತಾರೆ. ಹಣ್ಣು, ಜೇನು



ಮುಂತಾದವನ್ನು ಹಂಚಿಕೊಳ್ಳುತ್ತಾರೆ. ಹೀಗೆ ಅವರು 'ಪಳಗು'ತ್ತಾರೆ. ನಂತರ 'ನೀರಿಗೆಂತ ಅವಳು ಬಂದು, ಕಾಡಿಗೆಂತ ಅವನು ಬಂದು' ಇಬ್ಬರೂ ಪರಾರಿಯಾಗುತ್ತಾರೆ. ಯಾವುದಾದರೂ ದೂರದ ಪೋಡಿಗೆ ಹೋಗಿ ಸೇರಿಕೊಂಡಿರುತ್ತಾರೆ. ಇದನ್ನು ಹೆಣ್ಣು ಗಂಡಿನ ಪೋಡಿನವರು ಪತ್ತೆ ಹಚ್ಚಿ ಅವರಿಬ್ಬರನ್ನೂ ಕರೆತರುತ್ತಾರೆ. ನ್ಯಾಯ ಮಾಡಿ 12½ ರೂ. ತೆರ ವಿಧಿಸಿ ಅವರಿಗೆ ವಿವಾಹವಾಗಲು ಅನುಮತಿಸುತ್ತಾರೆ.

ಈ ತೆರನ ವಿವಾಹದ ಬಗ್ಗೆ ಸೋಲಿಗರಿಗೆ ಇದು ತಮ್ಮ ಪುಸುಮಾಲೆ-ರಂಗರಿಂದಲೂ ಬಂದಿರುವ ಪದ್ಧತಿಯೆಂದು ನಂಬಿಕೆಯಿದೆ. ರೂ.12½ ತೆರ ಯಾವುದೆಂದರೆ ರಂಗನು ಅತ್ತೆ ಮಾವಂದಿರಿಗೆ ಬಳುವಳಿಯಾಗಿ ಕಳಿಸಿದ ಅಮೂಲ್ಯ ನಿಧಿಯನ್ನು ಅದು ಎಷ್ಟು ಗಟ್ಟಿಯಾಗಿದೆಯೋ ಎಂದು ತಿಳಿಯಲು ಸೋಲಿಗರು ಕಮರಿಯಲ್ಲಿ ಕೇರಿದಾಗ ಉಳಿದ ಹಣ. ನಿಮಗೆ ಇಷ್ಟೇ ಶಾಶ್ವತವಾಗಲಿ ಎಂದು ರಂಗ ಬೇಸರಿಸಿ ನುಡಿದನಂತೆ. ಈಗ ಸೋಲಿಗರು 12½ ರೂ. ಗಳನ್ನು ಪವಿತ್ರವಾಗಿ ಸ್ವೀಕರಿಸಿರುವಂತೆ ಕಾಣುತ್ತದೆ.

ಪಂಚಾಯಿತಿ ಒಪ್ಪಿಗೆ ಕೊಟ್ಟ ನಂತರ ಹುಡುಗ-ಹುಡುಗಿಯರು ಮದುವೆ ಮಾಡಿಕೊಳ್ಳಬಹುದು. ಇದಕ್ಕಾಗಿ ಹುಡುಗನು (ಅವನ ಕಡೆಯವರು) ಊಟವನ್ನು ಏರ್ಪಡಿಸಬೇಕು.

ಇನ್ನೂ ನಾಲ್ಕನೇ ರೀತಿಯ ವಿವಾಹ ಹುಡುಗನು ಹುಡುಗಿಯ ಮನೆಯಲ್ಲಿಯೇ ಇದ್ದುಕೊಂಡು ಕೆಲವು ಕಾಲ, ಆರು ತಿಂಗಳಿಂದ ಒಂದು ವರ್ಷ, ಕೆಲಸ ಮಾಡಿ ತನ್ನ ಅರ್ಹತೆ ತೋರಿಕೊಡುವುದು. 'ಅಳಿಯನ ಸಾಹಸ' ಇಂತಹದೊಂದು ಕಥೆ. ಆದರೆ ಅದರಲ್ಲಿ ಅಳಿಯನು 14 ವರ್ಷಗಳ ಕೆಲಸ ಮಾಡಿದನೆಂದು ಬರುತ್ತದೆ. ಈ ಪದ್ಧತಿ ಹಿಂದೆ

ಇದ್ದಿತಾದರೂ ಈಗ ಪ್ರಚಲಿತವಿಲ್ಲ. ತಿಂಗಳುಗಳ ಕಾಲ ವರ್ಷ ಕಾಲ ಈ ರೀತಿ ಕೆಲಸ ಮಾಡದಿದ್ದರೂ ಸೋಲಿಗ ಯುವಕರು ತಾವು ಮಾಡಿಕೊಳ್ಳಲಿರುವ ಮನೆಗೆ ಹೆಚ್ಚು ಕೆಲಸ ಬಂದಾಗ ಸಹಾಯ ಮಾಡುವುದುಂಟು.

**ಸಮುದಾಯ ಕಳಕಳಿ**

ಸೋಲಿಗರಲ್ಲಿ ವಿಚ್ಛೇದನ, ಪುನರ್ವಿವಾಹಕ್ಕೆ ಅವಕಾಶವಿದ್ದರೂ ಅಂಥ ಸಂದರ್ಭಗಳು ಅಷ್ಟಾಗಿ ಬರಲಾರವು. ಏಕೆಂದರೆ ನ್ಯಾಯಗಳಲ್ಲಿ ಹೇಗಾದರೂ ಮಾಡಿ ಗಂಡ ಹೆಂಡತಿಯರನ್ನು ಮತ್ತೆ ಕೂಡಿಸುತ್ತಾರೆ. ಸೋಲಿಗರಲ್ಲಿ ವಿಧವಾ ವಿವಾಹಕ್ಕೆ ಅವಕಾಶವಿದೆ. ಪುನರ್ವಿವಾಹವಾದರೂ ಹಿಂದಿನ ಮಕ್ಕಳನ್ನು ಹೊಸದಾಗಿ ವಿವಾಹವಾದ ಗಂಡ ಹೆಂಡಿರು ಚೆನ್ನಾಗಿಯೇ ನೋಡಿಕೊಳ್ಳುವರು. ಅಷ್ಟೆ ಅಲ್ಲ. ಸೋಲಿಗ ಸಮುದಾಯಗಳಲ್ಲಿ ಅನಾಥ ಮಕ್ಕಳಿರುವುದಿಲ್ಲ. ಸಂಬಂಧಿಕರು ಯಾರಾದರೂ ನೋಡಿಕೊಳ್ಳುವರು. ಸಮುದಾಯ ಕಳಕಳಿ ವ್ಯಕ್ತಪಡಿಸುವುದು.

ವಯಸ್ಸಿಗೆ ಮರ್ಯಾದೆ ಸಲ್ಲುವ ಸೋಲಿಗ ಜನಾಂಗದಲ್ಲಿ ವೃದ್ಧರಿಗೆ ಗೌರವ ಆದರಗಳು ಸಲ್ಲುತ್ತವೆ. ಅವರಿಗೆ ಊಟ ಕೊಡುವುದೂ, ಗೆಡ್ಡೆ ಗೆಣಸು ಕೊಡುವುದೂ ಮಾಡುತ್ತಾರೆ. ಬೇಕಾದಾಗ ನಾರು ಬೇರು ಔಷಧಿಗಳಿಂದ ಉಪಚರಿಸುತ್ತಾರೆ. ದೇವರನ್ನು ಬರಮಾಡಿ ವಿಭೂತಿ ಪಡೆಯುತ್ತಾರೆ. ಸಾಮಾನ್ಯವಾಗಿ ಪಂಚಾಯಿತಿಯಲ್ಲಿ ಇನ್ನೂ ಸದೃಢರಾಗಿರುವ ಹಿರಿಯರೇ ಇರುತ್ತಾರೆ. ಅವರು ಕೈಲಾಗುವವರೆಗೂ ಇರಬೇಕೆಂಬುದೇ ಸೋಲಿಗರ ಆಶಯ.

ಸೋಲಿಗರ ಸಂಭಾವಿತ ವರ್ತನೆ ಕೆಲವು ಸಭೆ ಸಮಿತಿಗಳನ್ನು ಮಾಡುವಾಗ ಈ ಲೇಖಕರ ಅನುಭವಕ್ಕೆ ಬಂದಿತು. ಯಾರಾದರೂ ಹಿರಿಯರನ್ನು ಲೋಕಾಭಿರಾಮವಾಗಿ ಸಹ "ಇಂಥವರು ನಮಗೆ ಅಧ್ಯಕ್ಷರಾಗಲಿ" ಎಂದು ನುಡಿದುಬಿಟ್ಟರೆ ಸಾಕು: ಮಿಕ್ಕೆಲ್ಲರೂ ಹೌದು ಅವರೇ ಅಧ್ಯಕ್ಷರಾಗಲಿ ಎಂದು



ಒಪ್ಪಿ ಸಮರ್ಥನೆ ಮಾಡಿಬಿಡುತ್ತಾರೆ. ಇದು ಲೌಕಿಕ ದೃಷ್ಟಿಯಿಂದ ಅದರಲ್ಲಿಯೂ ನಾಡ ಸಂಸ್ಕೃತಿಯವರಿಗೆ ಸರಿಬರದಿದ್ದರೂ ಇದರ ಹಿಂದಿರುವ ಮಾನವೀಯತೆ, ಯಾರಿಗೂ ನೋವುಂಟುಮಾಡದ ಸಹೃದಯತೆಯನ್ನು ನಾವು ಗಮನಿಸಬೇಕು. ವ್ಯಾವಹಾರಿಕ ದೃಷ್ಟಿಯಿಂದ ಈ ವಿಚಾರಗಳಲ್ಲಿ ಅನೇಕ ಸಲ ನಮ್ಮ ಸಮಾಜ ಕಾರ್ಯಕರ್ತರು ಮುನ್ನೆಚ್ಚರಿಕೆ ತೆಗೆದುಕೊಳ್ಳಬೇಕಾಗುತ್ತಿತ್ತು.

**ಸಾವು ಸಹಜ**

ಸಾವು ಸಹಜವೆಂಬ ಅರಿವು ಸೋಲಿಗರಲ್ಲಿ ಕಾಣಬರುತ್ತದೆ. ಆದ್ದರಿಂದಲೇ ಅತಿ ಚೀರಾಟವಾಗಲಿ ಗೋಳಾಟವಾಗಲಿ ಇಲ್ಲಿ ಕಾಣುವುದಿಲ್ಲ. ಪ್ರತಿ ಕುಟುಂಬಕ್ಕೂ ಶವಸಂಸ್ಕಾರ ಸ್ಥಳವೆಂಬುದೊಂದಿದ್ದು ಅಲ್ಲಿಯೇ ಶವಸಂಸ್ಕಾರ ನಡೆಯುತ್ತದೆ. ಶವವನ್ನು ಹೂಳುವುದು ಪದ್ಧತಿ. ಚಿಕ್ಕಸೂಲುಸಹ ಹೋಗಿಬಿಟ್ಟಾಗ ಮನುಷ್ಯ ಸತ್ತನೆಂದು ಅರ್ಥ. ಶವಸಂಸ್ಕಾರ ಮಾಡುವಾಗ ಎಲ್ಲ ಕುಲಗಳವರೂ ಬರಲೇಬೇಕು. ಪ್ರತಿ ಮನೆಯವರೂ ಭಾಗವಹಿಸುತ್ತಾರೆ. ಪೋಡಿಗೆಲ್ಲ ಸೂತಕ ಇರುತ್ತದೆ. ಶವವನ್ನು ಬಿಸಿನೀರಿನಲ್ಲಿ ಮೀಯಿಸಿ ಒಗೆದ ಬಟ್ಟೆ ಹಾಕಿ, ಹಣೆಗೆ ವಿಭೂತಿ ಬಳಿದು ದೇಹಾದ್ಯಂತ ಕಾಡುಹೂಗಳನ್ನಿರಿಸಿ ಅಲಂಕರಿಸುತ್ತಾರೆ. ಕಿರಿಯರೆಲ್ಲ ಹೆಣಕ್ಕೆ ಕಾಲು ಮುಟ್ಟಿ ನಮಸ್ಕರಿಸುತ್ತಾರೆ. ಹೆಣವನ್ನು ಕೊಂಡೊಯ್ಯುವಾಗ ಒಂದೇ ಕಟ್ಟಿಗೆಗೆ ಮೂರು ಕಡೆ ಹೆಣವನ್ನು ಕಟ್ಟಿ ಸಾಮಾನ್ಯವಾಗಿ ತೆಗೆದುಕೊಂಡು ಹೋಗುವ ಇದಕ್ಕೆ ಒಂಟಿಸೆಟ್ಟವೆಂದು ಹೆಸರು. ಗುಳಿಯನ್ನು ತೋಡಿ ಒಳಗಡೆ ಒಂದು ಕಡೆ ಟೊಳ್ಳು ಮಾಡಿ ಅದರಲ್ಲಿ ಶರೀರವನ್ನಿಳಿಸಿ ದಕ್ಷಿಣಕ್ಕೆ ತಲೆ ಮಾಡಿ, ಗುಳಿಯಲ್ಲಿ ಆ ಮನುಷ್ಯ ಉಪಯೋಗಿಸುತ್ತಿದ್ದ ಮಚ್ಚು, ಕುಡುಗೋಲು, ಬಟ್ಟೆಗಳು ಮುಂತಾದುವಿಟ್ಟು ರಾಗಿ ಮುದ್ದೆ, ಬೀಡಿ, ಬೆಂಕಿಪೊಟ್ಟಣ ಸಹಾ ಇಟ್ಟು ಅದನ್ನು ಸಣ್ಣ ಕೋಲುಗಳನ್ನು ನಿಲ್ಲಿಸುವುದ

ರಿಂದ ಟೊಳ್ಳನ್ನು ಮುಚ್ಚುತ್ತಾರೆ. ನಂತರ ಮಣ್ಣಿನಿಂದ ಗುಳಿಯನ್ನು ಮುಚ್ಚುತ್ತಾರೆ. ಹುಳಿ ದುಃಖವನ್ನು ಕಡಿಮೆ ಮಾಡುವುದೆಂಬ ನಂಬಿಕೆಯಲ್ಲಿ ಹುಣಸೆಹುಳಿ ರಸವನ್ನು ಸೇವಿಸುತ್ತಾರೆ. ಇದಕ್ಕೆ ಮುಂಚೆ 'ಮಮಟಿ ಶಾಸ್ತ್ರ'ವೆಂಬ ಬೆನ್ನ ಹಿಂದಿನಿಂದ ಸನಿಕೆ ಕೊಡುವ ಶಾಸ್ತ್ರವನ್ನು ಮಾಡುತ್ತಾರೆ. ಈ ಶಾಸ್ತ್ರ ವಿಧಿಗಳೆಲ್ಲವೂ ಅಲ್ಲಲ್ಲಿಯೇ ಸಿಗುವ ಪದಾರ್ಥಗಳಿಂದ ನಡೆಸಲ್ಪಟ್ಟು ಬಡವರ ಮೇಲೆ ಆರ್ಥಿಕ ಹೊರೆಯಾಗಲಿ ಕಷ್ಟಗಳಾಗಲಿ ಉಂಟಾಗುವುದಿಲ್ಲ. ಶವ ಸಮಾಧಿಯ ಮೂರು ದಿನದ ನಂತರ ಆ ಸ್ಥಳದಲ್ಲಿ ರಾಗಿ ಮುದ್ದೆ, ಕುಡಿಯುವ ನೀರನ್ನಿಟ್ಟು ಬುಟ್ಟಿ ಮುಚ್ಚಿ ಸಗಣಿ ಸಾರಿಸುತ್ತಾರೆ. ಅದನ್ನು ತೆಗೆದು ನೋಡಿದಾಗ ಚೆಲ್ಲಾಪಿಲ್ಲಿಯಾಗಿ ಕೆಡದಿದ್ದರೆ, ನೀರು ಕಡಿಮೆಯಾಗದಿದ್ದರೆ ಸರಿ, ಇಲ್ಲದಿದ್ದರೆ ಆ ಸೂಲು ದೆವ್ವವಾಗಿರಬಹುದೆಂಬ ನಂಬಿಕೆ. ಅದಕ್ಕೆ ದೇವರನ್ನು ಕೇಳಬೇಕು. ಏನಾದರೂ ಪೂಜೆ, ಬಲಿ ಕೊಡಬೇಕಾಗಬಹುದು.

ಸತ್ತ ವ್ಯಕ್ತಿ ಆನೆಯಿಂದಾಗಲಿ, ಹುಲಿಯಿಂದಾಗಲಿ ಸತ್ತಿದ್ದರೆ 'ರಾವು ಕಟ್ಟುವುದು' ರೂಢಿಯಲ್ಲಿದೆ. ಆನೆಯ ಗೊಂಬೆ ಅಥವಾ ಹುಲಿಯ ಗೊಂಬೆ ಮಣ್ಣಿನಲ್ಲಿ ಮಾಡಿ ಆ ವ್ಯಕ್ತಿ ಅಹುತಿಯಾದ ಸ್ಥಳದಲ್ಲಿ ಜಜ್ಜಿ ಕೋಳಿ ಬಲಿ ಕೊಡಬೇಕು. ಇದು ಮೃತನ ಆತ್ಮವನ್ನು ಶಾಂತಿ ಮಾಡುವ ಕ್ರಿಯೆ. ಮರದಿಂದ ಬಿದ್ದು ಸತ್ತಾಗಲೂ ಇದೇ ರೀತಿ ಶಾಂತಿ ಮಾಡಬೇಕಾಗುತ್ತದೆ.

ಸತ್ತ ಮನುಷ್ಯನ ಕುರುಹಾಗಿ ಉಪಯೋಗಿಸುವ ಕಲ್ಲೇ 'ಕಲ್ಲುಗೊಂಬೆ'. ಇದನ್ನು ಆಯಾ ಕುಲದವರು ಗೊತ್ತುಮಾಡಿರುವ 'ಕಲ್ಲು ಗುಡಿ'ಗೆ ಶಾಸ್ತ್ರೋಕ್ತ ವಾಗಿ ಸೇರಿಸಿಬಿಟ್ಟರೆ ಮುಗಿಯಿತು. ಮೃತನ ದೆಯ್ಯವು ಏನೂ ಕಾಟ ಕೊಡಲಾರದು. ಇದು ನಾಡಕಡೆ ಮೃತನ ಆತ್ಮವನ್ನು ವೈಕುಂಠಕ್ಕೋ ಕೈಲಾಸಕ್ಕೋ ಸೇರಿಸುವ ಕ್ರಿಯೆಯನ್ನು ನೆನಪಿಗೆ ತರುತ್ತದೆ. ಸಾವಿರಾರು ವರ್ಷಗಳ ಹಿಂದಿನ ಆದಿವಾಸೀ ಪದ್ಧತಿಗಳೇ ಬದಲಾವಣೆಗಳನ್ನೊಳಗೊಂಡು ನಾಡ ಪದ್ಧತಿಗಳಾಗಿರಬಹುದೆಂದರೆ ಅತಿಶಯೋಕ್ತಿಯೇನಲ್ಲ.



## ವಿಭಕ್ತ ಕುಟುಂಬ; ನಿಕಟ ಸಮುದಾಯ ಜೀವನ

ಸೋಲಿಗರು ನಿಕಟ ಸಮುದಾಯ ಜೀವನ ನಡೆಸುವರಾದರೂ. ವಿಭಕ್ತ ಕುಟುಂಬದವರು. ತಂದೆ ತಾಯಿ ಮದುವೆಯಾಗದ ಮಕ್ಕಳು ಸೇರಿ ಒಂದು ಕುಟುಂಬ. ಮದುವೆಯಾದ ಹೆಣ್ಣು ಗಂಡನ ಮನೆಗೂ ಗಂಡುಮಗ ಹೊಸ ಗುಡಿಸಲು ಕಟ್ಟಿಕೊಂಡು ಹೊಸ ಮನೆಗೂ ಸೇರಿಬಿಡುತ್ತಾರೆ. ಆದರೆ ಬಾಂಧವ್ಯ ಕಡಿಮೆಯಾಯಿತೆಂದಲ್ಲ. ಅಣ್ಣ, ಅತ್ತಿಗೆ, ಮಾವ, ಭಾವ, ಎಂದು ಕರೆಯುತ್ತಾ ವಿಶ್ವಾಸದಿಂದ ಕಾಣುತ್ತಾರೆ. ಹೆಂಗಸರಿಗೆ ನಾಡಕಡೆಗಿಂತಲೂ ಸ್ವಲ್ಪ ಹೆಚ್ಚಿನ ಸ್ವಾತಂತ್ರ್ಯವಿರುವಂತೆ ಕಾಣುತ್ತದೆ. ಹಿಂದೆಯೇ ತಿಳಿಸಿದಂತೆ ಸ್ವಂತ ಕುಲದಲ್ಲಿ ಮದುವೆಯಾಗಬಾರದು. ಹಾಗೆಯೇ ಅಣ್ಣ ತಂಗಿ ವರಸೆಯಲ್ಲಿ ಸಹ. (ಇದು ಪರೋಕ್ಷವಾಗಿ 'ಸಿಕಲ್ ಸೆಲ್' ಅನುವಂಶಿಕ ಖಾಯಿಲೆಯಿಂದ ಸ್ವಲ್ಪ ರಕ್ಷಣೆ ಕೊಟ್ಟಿರಲಿಕ್ಕೂ ಸಾಕು). ಈ ವಿಚಾರದಲ್ಲಿ ಹೆಚ್ಚು ಕಡಿಮೆ ನಾಡ ಸಂಪ್ರದಾಯಗಳೂ ಇವುಗಳಿಂದಲೇ ರೂಪುಗೊಂಡಿವೆ. ವಯಸ್ಸಾದವರಿಗೆ ಹೆಚ್ಚಿನ ಗೌರವ ಮರ್ಯಾದೆಗಳು ಸಲ್ಲುತ್ತವೆ. ಆದರೆ ಹಿಂದಿನಂತೆ 'ಕುರುಡು ಅನುಕರಣೆ' ಈಗಿರುವುದಿಲ್ಲ. ವಿದ್ಯಾಭ್ಯಾಸದ ರಶ್ಮಿಯ ಸ್ಪರ್ಶದಿಂದಾಗಿ ಭಯವು ಕಡಿಮೆಯಾಗಿದೆ. ಹಿಂದೆ ಭಾವನಾತ್ಮಕವಾಗಿ 'ನಾವು' ಎಂಬ ಭಾವನೆ ಸೋಲಿಗರಲ್ಲಿದ್ದುದು ಈಗಲೂ ಇದೆ; ಅದು ಈಗ ಸಂಘಟನಾ ಆವಶ್ಯಕತೆಗಳಿಂದಲೂ ಪ್ರಭಾವಿತವಾಗಿದೆ.

ಸೋಲಿಗರಲ್ಲಿ ಸಣ್ಣ ಕಳ್ಳತನಗಳೂ ಸುಳ್ಳು ಹೇಳುವುದು ಯಾರಲ್ಲಾದರೂ ಇದ್ದರೂ ಸಹ ಜನ ಸಾಮಾನ್ಯವಾಗಿ ಸರಳಜೀವಿಗಳು, ಪ್ರಾಮಾಣಿಕರು ಮತ್ತು ಶಾಂತಿಪ್ರಿಯರು; ಹಿಂಸೆ ಮಾಡರು. ಬೆಟ್ಟಗಳಲ್ಲಿ ಒಂದರ ಹೆಸರು 'ಕಳ್ಳರ ಬೆಟ್ಟ' ಎಂದಿರುವುದು ಬಹುಶಃ ಯಾವುದೋ ಕಾಲದಲ್ಲಿ ಕಾಡುಗಳ್ಳರು ಹೋಗಿ ಅಲ್ಲಿ ತಲೆಮರೆಸಿಕೊಂಡು ಕಾಟ ಕೊಡುತ್ತಿದ್ದರೆಂದು ಕಾಣುವುದು. ಅಂತಹವರನ್ನು ಕಂಡರೆ ಭಯದಿಂದ ದೂರವೇ ಇರುವ

ಸ್ವಭಾವದವರು ಈ ಆದಿವಾಸಿಗಳು. ಒಮ್ಮೊಮ್ಮೆ ಭಯದಿಂದಲೋ ಒಂದೆರಡು ರೂಪಾಯಿ ಕೂಲಿ ಆಸೆಯಿಂದಲೋ ಅವರಿಗೆ ಸಹಾಯ ಮಾಡಿದ್ದರೂ ಸಾಕು. ಆದಿವಾಸಿಗಳನ್ನು ನಾಡವರು, ಕಾಡುಗಳ್ಳರು, ಅಕ್ರಮ ಸಾಗಾಣಿಕೆದಾರರು ದುರುಪಯೋಗ ಮಾಡಿಕೊಂಡಿರುತ್ತಾರೆ.

## ಕುಲ ಪದ್ಧತಿ

ಹಿಂದೆ ತಿಳಿಸಿದಂತೆ ಬಿಳಿಗಿರಿ ರಂಗನ ಬೆಟ್ಟದ ಸೋಲಿಗರು ಐದು ಕುಲದ ಸೋಲಿಗರು. ಕುಲಗಳು ಯಾವುದೆಂದರೆ ಸಳಕರು, ತೆನೆಯರು, ಸೂರರು, ಬೆಳ್ಳರು ಮತ್ತು ಹಾಲರು. ಹಿಂದೆ ಸೇವಾವೃತ್ತಿ ಮಾಡುತ್ತಿದ್ದ 'ಬಳೆಯರು' ಎಂಬ ಆರನೇ ಕುಲವನ್ನು ಗುರ್ತಿಸಿದರೂ ಈ ನಡುವೆ ಆ ರೀತಿ ಭೇದಭಾವಗಳಿಲ್ಲ. ಇವರೊಡನೆ ಇತರರು ಮದುವೆಯಲ್ಲಿ ಕೊಟ್ಟು ತೆಗೆದುಕೊಳ್ಳುವುದೂ, ಹಬ್ಬ ಹುಣ್ಣಿಮೆಗಳಲ್ಲಿ ಒಟ್ಟಾಗಿರುವುದೂ ಕಂಡು ಬಂದಿದೆ. ತಮಿಳುನಾಡು ಕಡೆಯ ಗದ್ದೆ ಸಾಲು ಮುಂತಾದ ಪೋಡುಗಳಲ್ಲಿ ಏಳುಕುಲದ ಸೋಲಿಗರಿದ್ದಾರೆ. ಜವಾಬ್ದಾರಿ ವಿಷಯಗಳಲ್ಲಿ ಯಜಮಾನರು ಸೋಲಗಿತ್ತಮ್ಮ ಪುಸುಮಾಲೆಯ ಮುದ್ರೆಯುಂಗುರಕ್ಕೆ ಅಧಿಕಾರಿಗಳಿದ್ದು ಎಲ್ಲಾ ವಿಚಾರಗಳಲ್ಲಿಯೂ ಅಂತಿಮ ತೀರ್ಮಾನ ಕೊಡುವರು. ಪಟ್ಟೆಗಾರ, ಚಲುವಾದಿ, ಕೋಲುಕಾರರು ಕಾರ್ಯನಿರತ ಅಧಿಕಾರಿಗಳು, ದಳವಾದಿ ಇವರಿಗೆ ಸಹಾಯಕ. ಈ ಕೆಳಕಂಡ ಹೆಸರಿನ ಪ್ರತಿನಿಧಿಗಳು ಒಂದೊಂದು ಕುಲದಿಂದಲೂ ಪ್ರತಿನಿಧಿಸಿ ಕಾರ್ಯ ಮಾಡುವರು. ನ್ಯಾಯ ಕಾರ್ಯವಲ್ಲದೆ, ದೇವರ ಕಾರ್ಯಗಳು, ಮಾಲೆ ಹಾಕಿಸಿಕೊಳ್ಳುವುದು, ಪಲ್ಲಕ್ಕಿಗೆ ಹೆಗಲು ಕೊಡುವುದು ಮುಂತಾದ ಗೌರವಗಳನ್ನು ಈ ಪ್ರತಿನಿಧಿ ಗಳು ಮಾಡಬೇಕು.



| ಕುಲ | ಪದನಾಮ | ಕೆಲಸ |
|---|---|---|
| ಸಳಕರು | ಯಜಮಾನ | ಮುಖ್ಯಸ್ಥರು, ಸೋಲಿಗಿತ್ತಮ್ಮ ಪುಸುಮಾಲೆಯ ಮುದ್ರೆಯುಂಗುರಕ್ಕೆ ಹಕ್ಕುದಾರರು, ನ್ಯಾಯದಲ್ಲಿ ತೀರ್ಮಾನ ಹೇಳುವವರು. |
| ತೆನೆಯರು | ಪಟ್ಟೆಗಾರ | ಇವರು ಪುಸುಮಾಲೆ ಕುಲದವರೆಂದು ಪ್ರಸಿದ್ಧಿ. ನ್ಯಾಯಕ್ಕೆ ದಿನ ಗೊತ್ತು ಮಾಡುವವರು; ಪೋಡುಗಳಲ್ಲಿ ಆಶೀರ್ವಾದ ಹೇಳುವವರು; |
| ಸೂರರು | ಚಲುವಾದಿ | ಯಜಮಾನರಿಗೆ ಸಹಾಯ ಮಾಡುವವರು, ಕಾರ್ಯ ನಿರತರು. |
| ಬೆಳ್ಳರು | ಕೋಲುಕಾರ | ಶಿಸ್ತನ್ನು ಜಾರಿ ಮಾಡುವ ಅಧಿಕಾರಿ, ಕೊಂಡಿಕೋಲು ಹಿಡಿದಿರುವವರು. |
| ಹಾಲರು | ದಳವಾದಿ | ಕೋಲುಕಾರರಂತೆ ಇತರ ಕೆಲಸ ಮಾಡುವವರು. |

ಈ ಪದಾಧಿಕಾರಿಗಳೆಲ್ಲರೂ ಪುರುಷರೇ ಆಗಿರುತ್ತಾರೆಂದು ಗಮನಿಸ ಬಹುದು. ಈ ಹಿನ್ನೆಲೆಯಲ್ಲಿ ಸೋಲಿಗ ಅಧಿಕಾರವು ಪುರುಷಮಯ ವಾದರೂ ನ್ಯಾಯಗಳಲ್ಲಿ ಮಹಿಳೆಯರ ಹಕ್ಕನ್ನು ಆಸಕ್ತಿಗಳನ್ನು ಕಾಪಾಡು ತ್ತಾರೆಯೇ ಹೊರತು ಮೊಟಕುಮಾಡುವುದಿಲ್ಲ. ತಮಿಳುನಾಡಿನ ಕಡೆ ಇರುವ ಏಳುಕುಲಗಳೆಂದರೆ ಮೇಲಿನ ಐದು ಕುಲಗಳು ಮತ್ತು ಜೇನುಕುಲ ಮತ್ತು ಕುಂಬಳು ಕುಲ.

## ಸೋಲಿಗಿತ್ತಮ್ಮನ ಮೊಹರು

ಇದು ಸೋಲಿಗಿತ್ತಿ, ಪುಸುಮಾಲೆಯ ಬಂಗಾರದ ಮೊಹರೆಂದು ಪ್ರಸಿದ್ಧಿ. ರಂಗನನ್ನು ಪುಸುಮಾಲೆ ಮದುವೆಯಾದ್ದರಿಂದ ರಂಗನು ಸೋಲಿಗರಿಗೆ ಭಾವ. ಆದ್ದರಿಂದ ಸೋಲಿಗರಿಗೆ ತಮ್ಮವನೆ ಆಗಿ ಒಲಿದುಬಂದ ದೈವ. ಈ ಮುದ್ರೆಯುಂಗರವು ಯಜಮಾನರ ಬಳಿ ಇರಬೇಕು. ಇವರು ಸಳಕರ ಕುಲದವರಾದ್ದರಿಂದ, ಆ ಕುಲದ ಬಹಳ ಹಿರಿಯ ಉತ್ತಮ ಗುಣದ ಮತ್ತು ಎಲ್ಲರಿಂದಲೂ ಗೌರವಿಸಲ್ಪಟ್ಟ 3-4 ಹೆಸರುಗಳನ್ನು ಚೀಟಿಗಳಲ್ಲಿ ಬಿಳಿಗಿರಿ ರಂಗಸ್ವಾಮಿ ಪಾದದಲ್ಲಿ ಹಾಕುತ್ತಾರೆ. ಇದು ತೆಪ್ಪದ ಸಮಯದಲ್ಲಿ ಬಿಳಿಗಿರಿ ರಂಗಸ್ವಾಮಿ ದೇವಸ್ಥಾನದಲ್ಲಿ ಅರ್ಚಕರ ಸಹಾಯದಿಂದ ನಡೆಯುತ್ತದೆ. ಯಾರ ಹೆಸರು ಬರುವುದೋ ಅವರನ್ನು ಕೆಲವು ವರ್ಷ (ಸುಮಾರು 5 ವರ್ಷ) ಅತ್ಯಂತ ದೊಡ್ಡ ಯಜಮಾನರನ್ನಾಗಿ ಪರಿಗಣಿಸಿ ಮುದ್ರೆಯುಂಗುರ ವನ್ನು ಸಮುದಾಯವು ದಯಪಾಲಿಸುತ್ತದೆ. ಇದರೊಡನೆ ಅದೇ ಪೆಟ್ಟಿಗೆ ಯಲ್ಲಿ ಸ್ವಾಮಿ ಉಂಗುರವನ್ನು ಕೊಡುತ್ತಾರೆ. ಅದು ಬೆಳ್ಳಿ ಉಂಗುರ. ಅವರು ಆ ಅವಧಿಯಲ್ಲಿ ಸಮುದಾಯಕ್ಕೇ ಮುಖ್ಯಸ್ಥರಾಗಿರುತ್ತಾರೆ. ದೊಡ್ಡ ನ್ಯಾಯಗಳಲ್ಲಿ ಇದನ್ನು ಇಟ್ಟುಕೊಂಡು ಕಡೆಯಲ್ಲಿ ನಮಸ್ಕಾರ ಸಲ್ಲಿಸುತ್ತಾರೆ.

ಸವಣ ತಿಂಗಳಲ್ಲಿ (ಶ್ರಾವಣ ಮಾಸ) 'ತಾಯಿಗೆ ಎಡೆ'ಯೆಂದು ಪುಸುಮಾಲೆಗೆ ವಿಶೇಷ ಪೂಜೆ ಸಲ್ಲುತ್ತದೆ. ಇದರೊಡನೆ ಸ್ವಾಮಿಯುಂಗುರ (ರಂಗಸ್ವಾಮಿ) ಪೂಜೆ ಇದೆ.

"ಸಿನ್ನದ ಉಂಗುರ ಸಿಖೆಯಲ್ಲಿ
ಬೆಳ್ಳಿಯ ಉಂಗುರ ಬೆರಳಲ್ಲಿ" ಎಂಬುದು ಆಡು ಮಾತು.

## ಸೋಲಿಗ ನ್ಯಾಯ ಪದ್ಧತಿ

ಸೋಲಿಗ ನ್ಯಾಯ ಪದ್ಧತಿ ನಿಜಕ್ಕೂ ಪ್ರಶಂಸಾರ್ಹವಾದದ್ದು. ಅಜ್ಞಾತ



ಕಾಡು ಮೇಡುಗಳಲ್ಲಿ ಇಷ್ಟು ಸೃಜನಶೀಲ, ಕ್ರಿಯಾತ್ಮಕ, ಬುದ್ಧಿವಂತಿಕೆಯ ಒಂದು ಪದ್ಧತಿ ರೂಪುಗೊಂಡಿದೆಯೆಂದರೆ ಅದೇ ಆಶ್ಚರ್ಯ ಮತ್ತು ಹೆಮ್ಮೆ! ಇನ್ನೂ ಅಭಿಮಾನದ ಸಂಗತಿಯೆಂದರೆ ಈ ಪದ್ಧತಿ ಇನ್ನೂ ಜೀವಂತ ವಾಗಿರುವುದು. ಇಂದಿನ ಆಧುನಿಕ ನ್ಯಾಯ ಪದ್ಧತಿಯಲ್ಲಿರುವ ನೀತಿ ಯೆಂದರೆ ಸರಳವನ್ನು ಕ್ಲಿಷ್ಟಮಾಡಿ, ವಾದಿಗಳನ್ನು ಶಾಶ್ವತ ವೈರಿಗಳನ್ನಾಗಿ ರೂಪಿಸಿ, ಧನಹಾನಿ, ಆರೋಗ್ಯಹಾನಿ ಮಾಡಿ ಮನಃಶಾಂತಿ ಕೆಡಿಸಿ 'ಗೆದ್ದವನು ಸೋತ ಸೋತವನು ಸತ್ತ' ಎಂಬುದನ್ನು ಸಿದ್ಧಪಡಿಸುವುದು. ಈಗೀಗ, ಈ ಹಳೇ ನ್ಯಾಯಪದ್ಧತಿಗಳಿಂದ ಪ್ರಭಾವಿತರಾಗಿಯೋ, ಅನ್ಯಾಯದಲ್ಲಿ ನೊಂದೋ, ಆಧುನಿಕರೂ 'ರಾಜೀ' ಮುಂತಾದ ಪದ್ಧತಿ ಗಳಿಗೆ ಮೊರೆ ಹೋಗುತ್ತಾರೆ. ಕೋರ್ಟಿನಲ್ಲಿ ಮೇಲೆ ತಿಳಿಸಿದ ಹಾನಿಗಳು ಮಾತ್ರವಲ್ಲದೆ 'ವಿಳಂಬ'ವಾಗುವುದರಿಂದ ಅನೇಕ ಬಾರಿ ಯಾರಿಗೆ ನ್ಯಾಯ ಸಿಕ್ಕಬೇಕೋ ಅವರು ಜೀವಂತವೇ ಇರುವುದಿಲ್ಲ. ಇದೆಲ್ಲದರಿಂದಲೂ ಮುಕ್ತ ವಾಗಿ ಸೋಲಿಗ ನ್ಯಾಯಪದ್ಧತಿ ಪುರಾತನಕಾಲದಿಂದಲೇ ರೂಪುಗೊಂಡಿದೆ. ಒಂದು ಪೈಸೆ ಖರ್ಚಿಲ್ಲದೆ ವಾದಿ ಪ್ರತಿವಾದಿಗಳಿಗೆ ನ್ಯಾಯ ಸಿಗುತ್ತದೆ. ಕೇವಲ ದಿನಗಳಲ್ಲಿ ಅಥವಾ ವಾರಗಳಲ್ಲಿ, ಒಮ್ಮೊಮ್ಮೆ ಅದೇ ದಿನ ನ್ಯಾಯ ವಿತರಣೆಯಾಗುತ್ತದೆ.

ಸುಮಾರಾಗಿ ದೊಡ್ಡದೆನ್ನಬಹುದಾದ ಸಿವಿಲ್ ಕ್ರಿಮಿನಲ್ ವ್ಯಾಪ್ತಿಯ ಮೊಕದ್ದಮೆಗಳನ್ನುಳಿದು ಮಿಕ್ಕೆಲ್ಲವೂ ಗಿರಿಜನ ನ್ಯಾಯ ಪದ್ಧತಿಯಲ್ಲಿಯೇ ವಿತರಣೆಯಾಗುತ್ತದೆ. ಈ ಸರಹದ್ದಿನ ಅಷ್ಟೇಕೆ, ಸಾಮಾನ್ಯವಾಗಿ ಸೋಲಿಗ ಜನಾಂಗವು ಶಾಂತಿಪ್ರಿಯವಾಗಿದ್ದು ಒಂದು ಪೋಡಿನ ಮೇಲೆ ಮತ್ತೊಂದು ಪೋಡಾಗಲಿ, ತೀವ್ರತರದ ಕೇಸಾಗಲಿ ಬಂದೇಯಿಲ್ಲವೆಂದು ಹೇಳಬಹುದು. ನಾಡವರು ಸೇರಿಕೊಂಡು ಆ ರೀತಿ ಸಂದರ್ಭಗಳೊದಗಿ ಪೋಲಿಸ್ ಸ್ಟೇಷನ್‌ಗೆ ಹೋಗಿರಬಹುದಾದರೂ ಸೋಲಿಗರು ಇಂದಿನವರೆಗೂ

ಪೋಲಿಸ್ ಸ್ಟೇಷನ್‌ಗೆ ಹೋಗುವ ಪರಿಪಾಟವಾಗಲಿ ಅಗತ್ಯತೆಯಾಗಲಿ ಕಂಡುಕೊಂಡಿಲ್ಲ. ಹೊಡೆದಾಟ ರಕ್ತಪಾತಗಳನ್ನು ಮಾಡದೆ ತೀರ ನಿಷ್ಠುರ ಭಾಷೆಯನ್ನೂ ಸಹ ಬಳಸದ ಆದಿವಾಸಿಗಳಿಂದ ನಾಗರಿಕವೆನಿಸಿಕೊಂಡ ಜಗತ್ತು ಕಲಿಯುವುದು ಬೇಕಾದಷ್ಟಿದೆ.

ನ್ಯಾಯಪಂಚಾಯತಿಯಲ್ಲಿ ಸೋಲಿಗ ಮುಖ್ಯಸ್ಥರುಗಳು, ಮುಖ್ಯವಾಗಿ ಪದಾಧಿಕಾರಿಗಳು 'ಕಟ್ಟೆ'ಯ ಬಳಿ ಸೇರಿರುತ್ತಾರೆ. ಅದು ನ್ಯಾಯದ ಕಟ್ಟೆ; ದೇವಸ್ಥಾನದ ಜಗುಲಿ, ಮಂಟಪಗಳು ಮುಂತಾದವು ನ್ಯಾಯದ ಕಟ್ಟೆ ಗಳಾಗುತ್ತವೆ. ಯಜಮಾನ, ಪಟ್ಟೆಗಾರ, ಚಲುವಾದಿ, ಕೋಲುಕಾರ ಮತ್ತು ದಳವಾದಿ, ಇತರ ಪೋಡಿನ ಗಣ್ಯರು, ಗಂಡಸರು ಹೆಂಗಸರು ಎಲ್ಲರೂ ಸೇರುತ್ತಾರೆ. ಕೋಲುಕಾರರು ವಿಧಿವತ್ತಾಗಿ ಮುದ್ರೆಯುಂಗರ ಮೊಹರು ಪೆಟ್ಟಿಗೆಯನ್ನು ತರುತ್ತಾರೆ. ಅಲ್ಲಿ ಒಂದು ಚಿಕ್ಕ ಚಪ್ಪರ ಹಾಕಿ ಅಲ್ಲಿ ಭಕ್ತಿಯಿಂದ ಆ ಪೆಟ್ಟಿಗೆಯನ್ನಿಡುತ್ತಾರೆ. ಅದಕ್ಕೆ ನಮಸ್ಕರಿಸಿ ಅದರ ಎದುರಿನಲ್ಲಿ ಸಭೆಗಳನ್ನು ಮಾಡುತ್ತಾರೆ.

ಹೀಗೆ ಮುದ್ರೆಯುಂಗರ ಸಮ್ಮುಖದಲ್ಲಿ ಕುಳಿತ ಯಜಮಾನ, ಮಿಕ್ಕ ಕುಲಸ್ಥರು, ಜನರು ಎಲ್ಲರೆದುರಿನಲ್ಲಿ ಪಂಚಾಯಿತಿ ಆರಂಭಗೊಳ್ಳುತ್ತದೆ. ನ್ಯಾಯದ ಮುಂದೆ ಬರುವ ಸಮಸ್ಯೆಗಳೆಂದರೆ ಕೌಟುಂಬಿಕ ಸಮಸ್ಯೆಗಳು ಅಥವಾ ಯಾರಿಂದಲಾದರೂ ಕಳ್ಳತನ, ಬೈಗುಳ, ಹೊಡೆದಾಟ, ಮನೆಗೆ ನುಗ್ಗುವುದು ಇತ್ಯಾದಿ. ಸಮಸ್ಯೆ ಒಂದೇ ಪೋಡಿನದಾದರೆ ಅಷ್ಟು ಜನ ಭಾಗವಹಿಸಿದರೆ ಸಾಕು. ಹೆಚ್ಚಿನ ಪೋಡುಗಳು ಇದರಲ್ಲಿ ಭಾಗಿಯಾಗಿದ್ದರೆ ಆ ಪೋಡಿನ ಪದಾಧಿಕಾರಿಗಳು ಮತ್ತು ಜನರೂ ಭಾಗವಹಿಸಬೇಕಾಗುತ್ತದೆ.

ಫಿರ್ಯಾದು ಕೊಡುವವರು ಸಾಮಾನ್ಯವಾಗಿ ಕೋಲುಕಾರರಿಗೆ ಕೊಡ ಬೇಕು. ಅವರು ಅದನ್ನು ಚಲುವಾದಿಗೆ, ಚಲುವಾದಿ ಯಜಮಾನರಿಗೆ ಹೇಳಿ, ಯಜಮಾನರು ಪೆಟ್ಟೆಗಾರರಿಗೆ ತಿಳಿಸಿ, ದಿನ ಗೊತ್ತುಮಾಡಲು



ಹೇಳುತ್ತಾರೆ. ಪಟ್ಟೆಗಾರರು ನ್ಯಾಯಕ್ಕೆ ಎಲ್ಲರಿಗೂ ಅನುಕೂಲವಾದ ದಿನವನ್ನು ಗೊತ್ತುಪಡಿಸುತ್ತಾರೆ. ಇದನ್ನು ಎಲ್ಲರಿಗೂ ತಿಳಿಯಪಡಿಸಲು ಮೊದಲು ಕೋಲುಕಾರರ ತಮಟೆ ಸಾರಣೆ ಮಾಡುವುದರಿಂದ ಆಗುತ್ತಿತ್ತು. ಈಗ ಒಮ್ಮೊಮ್ಮೆ ಸಾರಣೆ, ಅನೇಕ ವೇಳೆ ಮೌಖಿಕವಾಗಿ ಮನೆಗಳಿಗೆ ವಿಷಯ ಮುಟ್ಟಿಸುವುದರಿಂದ ಆಗುತ್ತಿದೆ.

ಫಿರ್ಯಾದಿದಾರರನ್ನು ಮತ್ತು ಅಪರಾಧ ಹೊರಿಸಲ್ಪಟ್ಟವರನ್ನು ಮತ್ತು ಸಾಕ್ಷಿಗಳನ್ನು ಕೋಲುಕಾರರು ಹಾಜರುಪಡಿಸಬೇಕು. ಅವರು ಶಿಸ್ತಿನ ಅಧಿಕಾರಿ. ಆಗ ಯಾರು ಪ್ರತಿಭಟಿಸುವಂತಿಲ್ಲ. ಅಷ್ಟೆ ಅಲ್ಲ. ಆಲಸ್ಯ ಅನಾದಾರ ತೋರುವಂತಿಲ್ಲ. ಹಾಗೆ ಮಾಡಿದರೆ, ಏಟಿಗೆ ಬಂದರೆ, ಅದು ಇನ್ನೂ ದೊಡ್ಡ ತಪ್ಪಾಗಿ ಇನ್ನೊಂದು ನ್ಯಾಯಕ್ಕೆ ವಸ್ತುವಾಗುತ್ತದೆ.

ಯಾವುದೇ ನ್ಯಾಯ ನಡೆಯಬೇಕಾದರೆ ಅದಕ್ಕೆ ಫಿರ್ಯಾದು ಇರಬೇಕು. ಅದಿಲ್ಲದಿದ್ದರೆ ನ್ಯಾಯ ನಡೆಸುವಂತಿಲ್ಲ. ನೊಂದವರು ಯಾವ ಕಾರಣ ಕ್ಕಾದರೂ ಮುಂದೆ ಬರದಿದ್ದರೆ ಅವರ ಕಡೆಯವರು ಸಮಸ್ಯೆ ಮೇಲೆತ್ತಿ ನ್ಯಾಯ ಕೇಳಬಹುದು.

ನ್ಯಾಯ ಪಂಚಾಯಿತಿ ವಿಚಾರಣೆಯು ಸಾಮಾನ್ಯವಾಗಿ ಮಧ್ಯಾಹ್ನದ ವೇಳೆಗೆ ಸೇರಿ ಸಂಜೆಗೆ ಮುಗಿಯುವುದು. ಕೆಲವು ಬಾರಿ ರಾತ್ರಿಯವರೆಗೂ ನಡೆದು ಮುಗಿಯುವುದು. ಹಾಗೆ ಮುಗಿಯದಿದ್ದರೆ ಇನ್ನೊಂದು ದಿನ (ಸಾಮಾನ್ಯವಾಗಿ ಮರುದಿನವೇ) ಮುಂದುವರೆಸುವರು. (ಇತ್ತೀಚೆಗೆ ಜನರೇ ಅಂತಹ ದಿನಕ್ಕೆ 'ಹಿಯರಿಂಗ್' ಎಂಬ ಪದವನ್ನು ಬಳಸಲಾರಂಭಿಸಿದ್ದಾರೆ: ಇದರಲ್ಲಿ ತಮ್ಮ ನ್ಯಾಯವೂ ಕೋರ್ಟಿಗೇನೂ ಕಡಿಮೆಯಿಲ್ಲ ಎಂಬ ಆತ್ಮಪ್ರತ್ಯಯದ ದನಿಯಿದೆ.) ಒಂದು ಘಟನೆ ನಡೆದ ಮೇಲೆ ಎಷ್ಟು ದಿನವಾದರೂ ಸಮಸ್ಯೆಗಳ ಕೊಳೆ ಹಾಕುವುದಿಲ್ಲ. ಬೇಗ ಒಂದೆರಡು ವಾರಗಳಲ್ಲಿ ವಿಚಾರಣೆ ಆಗಿಹೋಗುತ್ತದೆ.

ಅನೇಕ ವರ್ಷಗಳ ಸಮುದಾಯದ ಅನುಭವದ ಬುದ್ಧಿವಂತಿಕೆ ಈ ನ್ಯಾಯದಲ್ಲಿ ಹೊರಬರುತ್ತದೆ. ಮಾಲು ಮಚ್ಚಿ ಸಹಿತ (ಅಂದರೆ ಸಾಕ್ಷ್ಯಾಧಾರಗಳೊಡನೆ) ವಿಚಾರಣೆ ನಡೆದು ತೀರ್ಮಾನ ಕೊಡಲ್ಪಡುತ್ತದೆ. ಇದರಲ್ಲಿ ಬುದ್ಧಿವಂತಿಕೆಯೊಡನೆ ಸಮುದಾಯದ ಹೃದಯವಂತಿಕೆಯು ಕಾಣಬರುತ್ತದೆ. ವಿಚಾರಣೆಯಲ್ಲಿ ಅಪರಾಧಿಯ ವಯಸ್ಸು ಸಂದರ್ಭ, ಒತ್ತಡಗಳು ಮುಂತಾದುವೆಲ್ಲ ಪರಿಗಣಿಸಲ್ಪಡುತ್ತದೆ. ಎಳೆಯರಿಗೆ, ಸ್ತ್ರೀಯರಿಗೆ ಸ್ವಲ್ಪ ಮೃದು ಧೋರಣೆ ತಾಳಲಾಗುತ್ತದೆ. ನ್ಯಾಯದಲ್ಲಿ ಮಾತನಾಡುವವರೆಲ್ಲರೂ ಖಂಡಿತವಾಗಿ ಪಾದರಕ್ಷೆಗಳನ್ನು ದೂರದಲ್ಲಿಯೇ ಬಿಟ್ಟುಬಂದು ಮಾತನಾಡಬೇಕು. ಮಾತಿನಲ್ಲಿ ನಯವಿನಯ ಗೌರವಗಳಿರ ಬೇಕು. ಕೆಟ್ಟ ಶಬ್ದಗಳನ್ನಾಡಬಾರದು. ಅದು 'ದೇವಸಭೆ'ಯೆಂದು ಪವಿತ್ರ ವಾಗಿ ಪರಿಗಣಿಸಲ್ಪಡುತ್ತದೆ.

ವಿಚಾರಣೆ ಚರ್ಚೆಗಳ ನಂತರ ಎಲ್ಲವನ್ನೂ ಕೂಲಂಕಷವಾಗಿ ಪರಿಶೀಲಿಸಿ ತೀರ್ಮಾನವನ್ನು ಪದಾಧಿಕಾರಿಗಳೆಲ್ಲ ಒಪ್ಪಿದ ನಂತರ ಯಜಮಾನರು ಉಚ್ಚರಿಸುತ್ತಾರೆ. ಹಿಂದಿನಕಾಲದಲ್ಲಿ ವಿವಿಧ ಶಿಕ್ಷೆಗಳಿದ್ದುವಾದರೂ ಇಂದಿನ ಕಾಲಕ್ಕೆ ಸಾಮಾನ್ಯವಾಗಿ ದಂಡ ಹಾಕುವುದು ರೂಢಿಯಲ್ಲಿದೆ. ಅದನ್ನು ರೂ. 1001 ರಿಂದ ಪ್ರಾರಂಭಿಸಿದರೂ ಶಿಕ್ಷೆಗೊಳಗಾದವರು ವಿನಂತಿಸಿ ಅದನ್ನು 100/-ರೂ. ಗಳು 50/-ರೂ.ಗಳಿಗೆ ಇಳಿಸಿಕೊಳ್ಳುವ ಸಾಧ್ಯತೆಯೆ ಹೆಚ್ಚು. ನ್ಯಾಯದಲ್ಲಿ ಎರಡು ಪಕ್ಷಗಳಲ್ಲಿ ಒಬ್ಬಗೊಬ್ಬರಿಗಿರುವ ಅಂತರವನ್ನು ಕಡಿಮೆ ಮಾಡಿ ನೀವು 'ಒಮ್ಮ ಸೊಮ್ಮಾಗಿರಿ' (ಒಂದಾಗಿ ಇರಿ) ಎಂಬ ನುಡಿಗಳನ್ನು ಹೇಳುತ್ತಾರೆ.

ಪುರಾತನಕಾಲದಲ್ಲಿ ಅತಿ ಕ್ರೂರವಾದ ಶಿಕ್ಷೆಗಳಿದ್ದುವೆಂದು ಹಿರಿಯರು ಹೇಳುತ್ತಾರೆ. ನಡುವಿಗೆ ನಾರು ಕಟ್ಟಿ ನೇತು ಹಾಕಿ ಏಟು, ಮೈಗೆ ಜೇನು ಬಳಿದು ಇರುವೆ ಗೂಡಿನ ಮೇಲೆ ಕುಳ್ಳಿರಿಸುವ ಶಿಕ್ಷೆ ಮುಂತಾಗಿದ್ದುವೆಂದು ನೆನಪಿಸಿಕೊಳ್ಳುತ್ತಾರೆ. ಹಾಗೆಯೇ ಸತ್ಯ ಮಾಡಲು ಕಾಯಿಸಿದ ಹಾರೆಯನ್ನು



ಕೈಲಿ ಹಿಡಿಸುವುದೂ ಇದ್ದಿತೆಂದು ಹೇಳುವರು. ಅದೃಷ್ಟವಶಾತ್ ಈಗ ಈ ರೀತಿ ಅಮಾನುಷ ಶಿಕ್ಷೆಗಳು ಇರುವುದಿಲ್ಲ. ಮತ್ತೊಂದು ತೀವ್ರ ಶಿಕ್ಷೆ ಎಂದರೆ 'ಜಾತಿ'ಯಿಂದ ಹೊರಹಾಕುವುದು, ಹಿಂದಿನ ಕಾಲದಲ್ಲಿ ಅಂಥವ ರಿಗೆ 'ಕೈಲಿ ಕಕ್ಕೆ ಸೊಪ್ಪು ಕೊಟ್ಟು ದನಿದ (ದನದ) ಮೂಳೆ ಸರ' ಹಾಕುತ್ತಿದ್ದ ರಂತೆ. ಇವರು ಜನಕ್ಕಿಲ್ಲ, ಜಾತಿಗಿಲ್ಲ, ಕುಲಕ್ಕಿಲ್ಲ, ಕೂಟಕ್ಕಿಲ್ಲ. ಇವರ ಹತ್ತಿರ ಬೆಂಕಿ, ಬಿಸಿ ನೀರು ಎತ್ತಬೇಡಿ ಎಂದು ಕಟ್ಟಪ್ಪಣೆ ಮಾಡುತ್ತಿದ್ದರಂತೆ. ಈಗ ಆ ರೀತಿ ಇರುವುದಿಲ್ಲ. ಅಷ್ಟೆ ಅಲ್ಲದೆ ಬೇರೆ ಜಾತಿಯೊಡನೆ ವಿವಾಹವಾದ ಪಕ್ಷದಲ್ಲಿ ಕೂಡ ಬಹಳ ಉದಾರತೆ ಇದೆ. ಹಿಂದಿನ ಸಂಕುಚಿತತೆ ಹೋಗಿ, 'ಇವ ಜಾತಿ ಬಿಟ್ಟ. ಅವ ಜಾತಿ ಬಿಟ್ಟ' ಎನ್ನದೆ ಬೇರೆ ಕಡೆ ಮದುವೆಯಾಗಿದ್ದರೂ ತಮ್ಮಲ್ಲಿ ಸ್ವೀಕರಿಸುತ್ತಾರೆ.

ನ್ಯಾಯಕ್ಕೆ ಮುಂಚೆ, ಒಮ್ಮೊಮ್ಮೆ 'ಅಪರಾಧಿ'ಯನ್ನು (ಅನೇಕ ಬಾರಿ ಹುಡುಗಿಯನ್ನು ಇಷ್ಟಪಟ್ಟ ಹುಡುಗ) ಗಿರಿಜನ ಯುವಕರು ಕಾವಲು ಕಾಯುತ್ತಾರೆ. ಏಕೆಂದರೆ ಅವನು ಓಡಿಬಿಟ್ಟರೆ ನ್ಯಾಯವೇ ಇಲ್ಲವಾಗುತ್ತದೆ. ನಂತರ ಅವನ ಕಡೆಯ ಹಿರಿಯರನ್ನೂ ಕರೆಸಿ ಮದುವೆ ಅಥವಾ ಇನ್ನಿತರ ನ್ಯಾಯವನ್ನು ನೆರವೇರಿಸುತ್ತಾರೆ.

### ಹೊರಪ್ರಪಂಚದ ಮನ್ನಣೆ

ಈ ನ್ಯಾಯಗಳು ಎಷ್ಟರ ಮಟ್ಟಿಗೆ ಯಶಸ್ವಿಯಾಗಿವೆಯೆಂದರೆ ಕೆಲವು ಅತ್ಯುತ್ಸಾಹಿಗಳು ಕುಲವನ್ನು ಮೀರಿ ಪೋಲಿಸ್ ಕಡೆ ಹೋದಾಗ, ಅಧಿಕಾರಿಗಳೇ 'ನಿಮ್ಮ ಕುಲದ ನ್ಯಾಯ ಮಾಡಿಕೊಳ್ಳಿ' ಎಂದು ಬುದ್ಧಿ ಹೇಳಿ ಕಳುಹಿಸಿರುತ್ತಾರೆ.

ನ್ಯಾಯದ ದುಡ್ಡಿನಲ್ಲಿ ಸಾಮನ್ಯವಾಗಿ ತಾಯಿ (ಪುಸುಮಾಲೆ) ಪೂಜೆ, ಮರಿ-ಕೋಳಿ ಸಾಮೂಹಿಕ ಊಟ — ಇದು ಯಾವಾಗಲಾದರೊಮ್ಮೆ ನಡೆಯುತ್ತದೆ.

## ವೀಳ್ಯ

ಇಬ್ಬರು ಗಿರಿಜನರ ನಡುವೆ ಏನಾದರೂ ಕಾರಣಕ್ಕೆ ವೈಮನಸ್ಯ ಇದ್ದರೆ, ಅದನ್ನು ಪರಿಹರಿಸಲು ವೀಳ್ಯ ಕೊಡಿಸುತ್ತಾರೆ. ನ್ಯಾಯದಲ್ಲಿ ಮುದ್ರೆಯುಂಗರ ದೆದರು ಇಬ್ಬರೂ ಪರಸ್ಪರ ವೀಳ್ಯ ಕೊಟ್ಟು, ಎರಡೂ ಕೈಗಳನ್ನು ಹಿಡಿದು ಕೊಳ್ಳುತ್ತಾರೆ. ಅವರ ವೈಮನಸ್ಯ ಕೊನೆಗೊಂಡು ಇಬ್ಬರಿಗೂ ಮುಗುಳ್ನಗೆ ಮೂಡುತ್ತದೆ. ಹೀಗೆ ನಿರಾಳವಾಗಿ ಒಂದಾಗುವ ರೀತಿ, ಅದರ ಹಿಂದಿರುವ ನಿಜವಾದ ಆಕಾಂಕ್ಷೆ ನಿಜಕ್ಕೂ ಮೆಚ್ಚುವಂತದು. ಇದು ಗಿರಿಜನರು ಮಗುವಿನಂತೆ ಸರಳತೆಯಿರುವವರೂ ಎಂದೂ ತೋರಿಸುತ್ತದೆ.

## ಕಟ್ಟು

ಈ ಲೇಖಕರು ಹಾಜರಿಯಿದ್ದ ನ್ಯಾಯಗಳೊಂದರಲ್ಲಿ 'ಕಟ್ಟು' ಎನ್ನುವ ವಿಶೇಷ ಪದ್ಧತಿಯೊಂದನ್ನು ಆಚರಿಸಲಾಯಿತು.

ಸಮಸ್ಯೆ ಹೀಗಿತ್ತು. ಅದು ಗಂಡ ಹೆಂಡಿರ ವಿಚಾರ. ಗಂಡನು ಮನೆಗೆ ಸ್ವಲ್ಪವೂ ಗಮನ ಕೊಡುತ್ತಿಲ್ಲವೆಂದೂ ಹೊಟ್ಟೆಗಿಲ್ಲದೆ ಮಾಡುತ್ತಿದ್ದಾನೆಂದೂ ಹೆಂಡತಿ ದೂರು ನೀಡಿದ್ದಳು. ವಿಚಾರಣೆಯಲ್ಲಿ ಹೆಂಡತಿಯೇ ಸರಿಯಾಗಿ ಮನೆ ಕಡೆ ನೋಡುತ್ತಿಲ್ಲವೆಂದು ಗಂಡನೇ ದೂರಿದ. ಇನ್ನೂ ಸ್ವಲ್ಪ ವಿಚಾರಣೆಯಾಗಿ ಎರಡರಲ್ಲೂ ಸತ್ಯಾಂಶ ತೋರಿದ್ದರಿಂದ ಅವರನ್ನು ಕಟ್ಟಿಗೆ ಒಪ್ಪಿಸಲಾಯಿತು.

'ಕಟ್ಟು' ಅಂದರೆ ನಿಯಮದ ಪ್ರಕಾರ ನಡೆದುಕೊಳ್ಳುವಿಕೆ. ಇದರಲ್ಲಿ ಒಳ್ಳೆಯ ನಡತೆಯನ್ನು ಸಾಬೀತು ಪಡಿಸಲು ಕಾಲಾವಕಾಶ ಕೊಡುತ್ತಾರೆ. ಯಾರಾದರೂ ಇಬ್ಬರು ಹಿರಿಯರನ್ನು ಯಾರಿಂದ ಕಟ್ಟು ತೆಗೆದುಕೊಳ್ಳ ಬೇಕೋ ಅಂತಹವರಿಗೆ ಹತ್ತಿರವೇ ವಾಸವಾಗಿರುವವರನ್ನು ಆರಿಸುತ್ತಾರೆ. ನ್ಯಾಯದ ಎರಡೂ ಕಡೆಯವರೊಡನೆ (ಈ ನ್ಯಾಯದಲ್ಲಿ ಗಂಡ-ಹೆಂಡತಿ) ಕೈ ಮೇಲೆ ಒಬ್ಬೊಬ್ಬ ಹಿರಿಯರೊಡನೆ ಭಾಷೆ ಹಾಕಿಸಿ, ಒಂದು ತಿಂಗಳಿ ನೊಳಗಾಗಿ ಒಳ್ಳೆಯ ನಡತೆಯನ್ನು ಪ್ರದರ್ಶಿಸಲು ಗಡುವು ನೀಡುತ್ತಾರೆ. ಈ ಹಿರಿಯರ ಕೆಲಸವೆಂದರೆ ಇಬ್ಬರೂ ಕಷ್ಟಪಟ್ಟು ಅವರವರ ವಾರಸು ದಾರರನ್ನು ಸನ್ಮಾರ್ಗಕ್ಕೆ ತರುವುದು.



ಒಂದು ತಿಂಗಳಿನ ನಂತರ ನ್ಯಾಯ ಮತ್ತೆ ಸೇರುತ್ತದೆ. ಸಾಮಾನ್ಯವಾಗಿ ಜನರು 'ಒಮ್ಮ ಸೊಮ್ಮೊಗ್ರಿರಲು' ಒಪ್ಪಿಕೊಂಡು ನ್ಯಾಯ ಬಗೆಹರಿ ಯುತ್ತದೆ. ಇದನ್ನು ನ್ಯಾಯದ ಪರವಾಗಿ ನೇಮಿಸಲ್ಪಟ್ಟ ಹಿರಿಯರು ಸಾಧಿಸಿರುತ್ತಾರೆ.

ಇನ್ನೊಂದು ಕಟ್ಟೆಂದರೆ ಗಂಡು ಹೆಣ್ಣಿನವರಿಗೆ 1001 ರೂ.ಗಳ ಕಟ್ಟಿಡು ವುದು. ಯಾರು ತಪ್ಪಿದರೆ ಅವರು 1001 ರೂ. ಕೊಡಬೇಕು. (ಇದೊಂದು 'ಬೈಲಿ' ನ ರೀತಿ ಇರುತ್ತದೆ)

ನ್ಯಾಯಗಳಲ್ಲಿ ಸಾಮಾನ್ಯವಾಗಿ ಗಂಡಸರಿಗೆ ದಂಡ ವಿಧಿಸಲ್ಪಟ್ಟು, ಹೆಣ್ಣಿಗೆ ದಂಡ ಇರುವುದಿಲ್ಲ. ಬುದ್ಧಿ ಹೇಳುವುದು ಛೀಮಾರಿ ಹಾಕುವುದು ಎಲ್ಲರಿಗೂ ಇರುತ್ತದೆ.

## ಕಂಬಳಿ ಗದ್ದುಗೆ

ನ್ಯಾಯ ಪ್ರಾರಂಭದಲ್ಲಿ ಕಿಂಡಿಯಿಟ್ಟು (ಅಂದರೆ ಕಲಶ, ಕಿಂಡಿ, ನೀರು, ಹೂ, ವೀಳೇದೆಲೆ, ತೆಂಗಿನಕಾಯಿ) ಪ್ರಾರಂಭಿಸಿ, ಐದು ಕುಲಕ್ಕೆ ವೀಳ್ಯ ಹಂಚಿ (ಹಾಲು) ಧಾರೆ ಎರೆಯುತ್ತಾರೆ. ಇದು ಬೆಳ್ಳರ ಕುಲದ ಜವಾಬ್ದಾರಿ. ಕಡೆಯಲ್ಲಿ ಕಂಬಳಿ ಗದ್ದುಗೆ ಹಾಸಬೇಕು. ಇದು ಯಜಮಾನರ ಕೆಲಸ. ದಂಡ ಹಾಕಲ್ಪಟ್ಟವರು ಅದನ್ನು ತಾವೇ ಇಡಬೇಕು ಮತ್ತು ಮೂರು ಸಾರಿ ಪಂಚಾಯಿತಿಗೆ ಅಡ್ಡ ಬೀಳಬೇಕು.

## ಪ್ರಾಯಶ್ಚಿತ್ತ

ನ್ಯಾಯದ ಮೂಲಕ, ಕುಲ ಬಿಟ್ಟು ಹೊರಹೋದವರಾಗಲಿ, ತಾವಾಗಿ (ಮದುವೆ ಇತ್ಯಾದಿಗಳಿಂದ) ಹೊರಹೋದವರಾಗಲಿ, ಯಾರಿಂದಲಾದರೂ

ಪಾದರಕ್ಷೆಯ ಏಟು ತಿಂದವರಾಗಲಿ, ಪ್ರಾಯಶ್ಚಿತ್ತ ಮಾಡಿಕೊಂಡು ಮತ್ತೆ ಸಮುದಾಯಕ್ಕೆ ಸೇರಬಹುದು.

ಈ ಪ್ರಾಯಶ್ಚಿತ್ತ ಅವರೇ (ಅಂದರೇ ನ್ಯಾಯಕ್ಕೆ ಕುಳಿತುಕೊಳ್ಳುವ ಕುಲದವರೇ) ಬಂದು 'ಒಳಿತು' ಮಾಡಬೇಕು. ಇದಕ್ಕೆ ಮರಿ-ಕುರಿ-ಬೇಳೆ ಎಲ್ಲ ಬೇಕಾಗುತ್ತದೆ.

ಪ್ರಾಯಶ್ಚಿತ್ತಕ್ಕೆ ಮುಂಚೆ, ಆ ವ್ಯಕ್ತಿಗೆ ನುಣ್ಣಗೆ ತಲೆ ಬೋಳಿಸಿಕೊಳ್ಳಬೇಕು, ಮದುವೆಯಾಗಿದ್ದರೆ, ಗಂಡ ಹೆಂಡತಿ ಇಬ್ಬರೂ ಬುಂಡೆ ಹೊಡೆಸಿರ ಬೇಕಾಗುತ್ತದೆ. ಅವರು ಕೆಲವು ಕಾಲ (ಆ ದಿನ) ಜನರಿಂದ ಬೇರೆಯಾಗಿರುತ್ತಾರೆ.

ಪ್ರಾಯಶ್ಚಿತ್ತ ಸಮಯ ಬಂದಾಗ ಆ ವ್ಯಕ್ತಿಯು, ಹಳ್ಳದಲ್ಲಿ ಮಿಂದು ಏಳು ಬಣ್ಣದ ಏಳು ತೆರೆಗಳನ್ನು ದಾಟಬೇಕು. ಹೀಗೆ ದಾಟಿಸುವ ಕೆಲಸವನ್ನು ಕೋಲುಕಾರ ಚಲುವಾದಿ ಮಾಡುತ್ತಾರೆ. ಕೋಲುಕಾರರು (ಇವರೇ ತೆರೆ ಹಾರಿಸುವವರು) ಹೀಗೆ ಹೇಳುತ್ತಾರೆ.

ಭೂಮಿ ತಾಯಿ ಒಳ್ಳೇದು
ಆಕಾಶ ಒಳ್ಳೇದು
ಚಂದ್ರ ಸೂರ್ಯಾದಿ ಒಳ್ಳೇದು
ನಮ್ಮ ಕುಲ ಒಳ್ಳೇದು
ನಮ್ಮ ದೇವರು ಒಳ್ಳೇದು
ಜಾತಿ ಜನ ಒಳ್ಳೇದು
ಬಂಧು ಬಳಗ ಒಳ್ಳೇದು
ತಂದೆ ತಾಯಿ ಒಳ್ಳೇದು
ಅಣ್ಣ ತಮ್ಮ ಒಳ್ಳೇದು
ಅಕ್ಕ ತಂಗಿ ಒಳ್ಳೇದು
ಮೇಲು ಲೋಕಕ್ಕೆ ಒಳ್ಳೇದು
ಕೀಳು ಲೋಕಕ್ಕೆ ಒಳ್ಳೇದು
ಹದಿನಾಲ್ಕು ಲೋಕಕ್ಕೆ ಒಳ್ಳೇದು
ದೇವರ ಲೋಕಕ್ಕೆ ಒಳ್ಳೇದು
ಕುಲಕ್ಕೆ ಒಳ್ಳೇದು
ಕೂಟಕ್ಕೆ ಒಳ್ಳೇದು



ಕೆಲವು ಕಡೆ ಲಿಂಗಕ್ಕೆ ಒಳ್ಳೇದು, ಜಂಗಮಕ್ಕೆ ಒಳ್ಳೇದು ಎಂದೂ ಇದೆ. ಇದು ಶೈವ ಹಿನ್ನೆಲೆಯನ್ನು ವಿವರಿಸುತ್ತದೆ. ಹಿಂದೆ ಮೊಳೆ ಕಾಸಿ ನಾಲಗೆಯ ಮೇಲಿಟ್ಟು ಪ್ರಾಯಶ್ಚಿತ್ತ ಮಾಡುತ್ತಿದ್ದರೆಂದು ತಿಳಿದುಬರುತ್ತದೆ. ಈಗ ಈ ಆಚರಣೆಯು ಇರುವುದಿಲ್ಲ.

ಅದಲ್ಲದೆ ಇದನ್ನು ಏಳು ದೇವಸ್ಥಾನಗಳ ಬಳಿ ಮಾಡುತ್ತಿದ್ದಂತೆ ಕಾಣುತ್ತದೆ. ಆದಾವುದೆಂದರೆ ಸಿದ್ದಪ್ಪ, ಜಡೆಸ್ವಾಮಿ, ಕೇತೇ ದೇವರು, ಕಡುವಿನ ಬಸಪ್ಪ, ಹಾಲು ಕೇತಪ್ಪ, ಸೊಪ್ಪಿತಾಳಿ ಬಸಪ್ಪ, ಹೊಂಗೆ ತೊಕ್ಕಿನ ದೇವರು ರಂಗಪ್ಪ. ಈಗ ಒಂದೆಡೆಯೇ ದೇವರ ಹೆಸರು ಹೇಳಿ ಮಾಡುತ್ತಾರೆ. ಪ್ರತಿ ಬಾರಿ ತೆರೆ ಹಾರಿಸುವಾಗಲೂ, ಒಂದೊಂದಾಗಿ ತೊಪ್ಪೆ ಸಗಣಿ ನೀರು, ತುಳಸೀ ನೀರು, ನಾಮದ ನೀರು, ಅರಿಶಿನ ನೀರು, ಕುಂಕುಮ ನೀರು ಹೀಗೆ ಏಳು ಬಣ್ಣದ ನೀರು ಹಾಕಿಸಿಕೊಳ್ಳಬೇಕು. ತೆರೆ ಹಾರಿಸಿದ ನಂತರ ಪ್ರತಿಬಾರಿ ತೀರ್ಥ ತೆಗೆದುಕೊಂಡ ನಂತರ, 'ಕಾಟಕರ್ಮ' ಎಲ್ಲ ಕಳೆದುಹೋಯಿತು ಎನ್ನುತ್ತಾರೆ. ವ್ಯಕ್ತಿಯ ಮನಸ್ಸಿಗೆ ನಿರಾಳವಾಗುತ್ತದೆ.

ನಂತರ ಸಾಮೂಹಿಕ ಭೋಜನ ಇರುತ್ತದೆ. ಎಲ್ಲರೂ ಕುಳಿತು ಊಟ ಮಾಡಿ, ಮಂಗಳ ಹೇಳಿ ಸಭೆ ಮುಕ್ತಾಯ ಮಾಡುತ್ತಾರೆ.

ಇಷ್ಟು ಜಾಣ್ಮೆಯಿಂದ ರೂಪಿಸಲ್ಪಟ್ಟಿರುವ ಈ ನ್ಯಾಯ ಪದ್ಧತಿಯನ್ನು ಉಳಿಸಿ ಬೆಳೆಸುವ ಆವಶ್ಯಕತೆ ಇಂದಿನ ಪರಿಸ್ಥಿತಿಯಲ್ಲಿ ಎಂದಿಗಿಂತ ಹೆಚ್ಚಾಗಿದೆಯೆಂದರೆ ತಪ್ಪಾಗಲಾರದು. ಆದಿವಾಸಿಗಳಲ್ಲಿರುವ ವ್ಯವಸ್ಥೆಗಳನ್ನು ಮುರಿಯದೆ ಮುಂದುವರಿಸುವುದೂ, ಅವರಿಗೆ ಈ ವಿಚಾರದಲ್ಲಿ ಕಾನೂನಿಗೆ ವ್ಯಾಪ್ತಿಯಿದ್ದಷ್ಟೂ ಸ್ವಾಯುತ್ತತೆ ನೀಡುವುದೂ ನೆಹರೂ ಪ್ರಣೀತ ಗಿರಿಜನರ ಪಂಚಶೀಲ ಪ್ರಕಾರವಾಗಿಯೂ ಇಂದಿನ ಸಂವಿಧಾನ ಪ್ರಕಾರವಾಗಿಯೂ ಸುಸಂಬದ್ಧವಾಗಿಯೇ ಇದೆ. ನ್ಯಾಯಾಲಯಗಳು ಇಂದು ಕೋರ್ಟು ಹೊರಗೆ ರಾಜಿ ಮುಂತಾದುವನ್ನು ಸ್ವೀಕರಿಸುತ್ತವೆ. ಆದ್ದರಿಂದ ಈ ವ್ಯವಸ್ಥೆ ನಶಿಸಿ ಹೋಗದಂತೆ ಶ್ರಮಿಸುವುದು ಎಲ್ಲರ ಕರ್ತವ್ಯವಾಗಿದೆ.

## ಕಾತು ಕಾಪಾಡುವ ದೇವರು

ಸೋಲಿಗರು ಪ್ರಕೃತಿಯ ಆರಾಧಕರು. ಇಂದು ಜಗತ್ತಿನ ಧರ್ಮಗಳಲ್ಲಿ ಕಂಡು ಬರುವ ಪ್ರಕೃತಿಯಾರಾಧನೆಗೆ ಮೂಲ ಆದಿವಾಸಿಗಳಲಿದ್ದ ಪ್ರಕೃತಿಯಾರಾಧನೆ ಹಂಬಲವೇ ಎಂದರೆ ತಪ್ಪಾಗಲಾರದು. ಅತಿ ನಿಬಿಡ ಕಾನನಗಳ ಮಧ್ಯೆ ಸೋಲಿಗರ ದೇವರ ತಾಣಗಳಿರುತ್ತವೆ. ದೊಡ್ಡ ಸಂಪಿಗೆ ಸ್ವಾಮಿ, ಮಾದೇವ, ಜಡೆಸ್ವಾಮಿ, ಮಲಕಮ್ಮ ಮುಂತಾದ ಅನೇಕ ದೇವರುಗಳನ್ನು ಅವರು ಪೂಜಿಸಿದರೂ ಸಾಮಾನ್ಯವಾಗಿ ಎಲ್ಲ ಕಡೆಯೂ ಇದ್ದು ರಕ್ಷಿಸುವ ದೇವರ ಕಲ್ಪನೆ ಅವರ ಮಾತು ಕಥೆಗಳಲ್ಲಿ ಕಂಡು ಬರುವುದು. ಆ ದೇವರಿಂದಲೇ "ಹುಲ್ಲು ಗಿಡ ಮರ ಚಿಗಿರಾದು, ಆತನೆ ಕಾತು ಕಾಪಾಡುತವನೆ" ಎಂಬ ಭಾವನೆ ಅವರಲ್ಲಿ ಇರುವುದು. ಇಷ್ಟೆ ಅಲ್ಲದೆ ಒಂದೊಂದು ವನದಲ್ಲಿಯೂ ಅಲ್ಲಿನ ದೇವರಿದ್ದು ವನದಿಂದ ವನಕ್ಕೆ ಪ್ರವೇಶಿಸುವಾಗ ಮನಸ್ಸಿನಲ್ಲಿಯೇ ಆ ದೇವಿಗೆ ನಮಸ್ಕರಿಸಿ ಮುಂದುವರಿಯುವರು. ಆನೆ ಕಂಡರೆ ಮನಸ್ಸಿನಲ್ಲಿಯೇ ನಮಸ್ಕರಿಸುವರು. ಈ ಉನ್ನತ ಗೌರವ ಭಾವನೆ ಎಷ್ಟು ಸುಂದರವಾಗಿ ವ್ಯಾಪಿಸಿದೆಯೆಂದರೆ 'ತೂಗಾಡುವ ಬಳ್ಳಿ ಸ್ವಾಮಿಗೆ ಜೋಕಾಲಿಯಂತೆ' ಎಂಬುದಾಗಿ ಸೋಲಿಗರ ವರ್ಣನೆಗಳಲ್ಲಿದೆ.

ಸೋಲಿಗರಲ್ಲಿ ಮನೆ ದೇವರು, ಕುಲದೇವರುಗಳು ಮಾತ್ರವಲ್ಲದೆ ನಾಡ ದೇವರುಗಳೂ, ಶೈವ ವೈಷ್ಣವ ಪ್ರಭಾವಗಳೂ ಸೇರಿಕೊಂಡಿರುವುದು ಕಂಡು ಬರುತ್ತದೆ. ಕೆಲವು ಮನೆಗಳಲ್ಲಿ ಮಾತ್ರ ಈ ಮನೆ ದೇವರನ್ನು ಇಟ್ಟಿದ್ದು, ಅವರು ವಿಶೇಷ ಶ್ರದ್ಧೆ ವಹಿಸಿ ಅದರ ಪವಿತ್ರತೆಯನ್ನು ನೋಡಿಕೊಳ್ಳಬೇಕು. 'ಹಡಗು' ಎಂದು ಕರೆಯಲ್ಪಡುವ ದೊಡ್ಡ ಬುಟ್ಟಿಯಲ್ಲಿ 'ಹಡಗಿನ ದೇವರು' ಎಂಬುದಾಗಿ ದೇವರನ್ನು ಇಟ್ಟಿರುತ್ತಾರೆ. ಈ ದೇವರನ್ನು ಪ್ರತಿನಿಧಿಸುವುದೆಂದರೆ ಕೆಲವು ಬೊಂಬೆಗಳು. ಇವಲ್ಲದೆ ಹೆಬ್ಬಾವಿನ ಮುಳ್ಳು, ಶಂಖ, ಜಾಗಟೆ ಮುಂತಾದವುಗಳು ಇರುತ್ತವೆ. ಮನೆ ದೊಡ್ಡ ಮಗನಿಗೆ ವಂಶ ಪಾರಂಪರ್ಯವಾಗಿ ಈ ದೇವರು ಹಕ್ಕು ಬಾಧ್ಯತೆಗಳೊಡನೆ ಬರುತ್ತದೆ. ಈ ದೇವರುಗಳಿಗೆ ಕೋಪ ಬಂದರೆ ಕೇಡಾಗುವುದೆಂಬ ಭಯದಲ್ಲಿ ಅತ್ಯಂತ ಎಚ್ಚರಿಕೆಯಿಂದ ಪೂಜಾದಿಗಳು ಸಲ್ಲುತ್ತವೆ.



ಮಾದೇವ, ಮಹದೇಶ್ವರ ಸೋಲಿಗರ ಪಾಲಿಗೆ ಮುದ್ದು ಮಾದಪ್ಪ. ಈ ದೇವರು ಶೈವ ಪ್ರಭಾವವನ್ನು ಸೂಚಿಸುತ್ತದೆ. ಲಿಂಗವಾಗಿ ಪೂಜಿಸಲ್ಪಡುವ ಶಿವನಿಗೆ ಮಾದೇಶ್ವರ, ಬಸವೇಶ್ವರ, ಕುಂಬಯ್ಯ ಮುಂತಾಗಿಯೂ ಪೂಜೆ ಸಲ್ಲುತ್ತದೆ.

ಜಡೇಸ್ವಾಮಿ ದೇವರೂ ಶೈವ ಪ್ರಭಾವವನ್ನು ಸೂಚಿಸುತ್ತದೆ. 101 ಜಡೆಗಳೊಡಗೂಡಿ ಹಣೆಯಲ್ಲಿ ವಿಭೂತಿ ಧರಿಸಿರುವ ಈ ದೇವರು ವೀರಭದ್ರನನ್ನು ನೆನಪಿಸುತ್ತಾನೆಂಬುದು ಮೊರಬ್‌ರವರ ಅಭಿಪ್ರಾಯ. ಸೋಲಿಗ ಹಿರಿಯರು ಹೇಳುವುದೆಂದರೆ ಈ ದೇವರು ಗೇರು ಮಾಳದ ದೇವರು (ಗೇರು ಮಾಳ ಚಾಮರಾಜನಗರ-ಸತ್ಯಮಂಗಲ ದಾರಿಯಲ್ಲಿದೆ). ಜಡೆಸ್ವಾಮಿ "ಬೂದಿಯಲ್ಲಿ ಹುಟ್ಟಿ ಭೂಲೋಕವ ನೋಡಿಕೊಳ್ಳುತವನೆ" ಒಮ್ಮೆ ನೀರಿನ ದೈವವೊಂದು ಕಾಲು ಹಿಡಿದಾಗ, "ಜಡೆಸ್ವಾಮಿ ನಡು ಬಾನಿಗೆ ಹೊರಟುಹೋದನು". ಮತ್ತೊಮ್ಮೆ ಕಾಲಿಗೆ ಸರಪಳಿ ಬಿದ್ದಾಗ "ಬೆಂಕಿಗೆ ಕಾಲು ಇಟ್ಟ ಸ್ವಾಮಿ, ಇಕ್ಕುಳ ಹಾಕಿ ಕತ್ತರಿಸಿನ ಕಮ್ಮಾರ" (ಸ್ವಾಮಿ ಬೆಂಕಿಯಲ್ಲಿ ಕಾಲು ಇಟ್ಟನು. ಸರಪಳಿಯನ್ನು ಕಮ್ಮಾರನು ಇಕ್ಕುಳದಿಂದ ಕತ್ತರಿಸಿದನು). ಹೀಗೆ ಜಡೆಸ್ವಾಮಿ ಅತ್ಯಂತ ಶಕ್ತಿಶಾಲಿ ದೇವರು. ಸೋಲಿಗರು ಹೆಸರಿಡುವಾಗ ಜಡೆಯಪ್ಪ, ಜಡೆಸ್ವಾಮಿ, ಜಡೆಯ ಎಂದೂ ಜಡೆಮಾದಿ ಎಂದೂ ಹೆಸರಿಡುತ್ತಾರೆ.

ಸೋಲಿಗರ ಬಾಳಲ್ಲಿ ಪ್ರವೇಶಿಸಿ ಹಾಸುಹೊಕ್ಕಾಗಿ ಸೇರಿಕೊಂಡಿರುವ ದೇವರೆಂದರೆ ರಂಗ. ಇದು ವೈಷ್ಣವ ಪ್ರಭಾವವನ್ನು ಸೂಚಿಸುವುದಲ್ಲದೆ

ಸೋಲಿಗರಿಗೆ ರಂಗನೊಡನಿರುವ ಬಾಂಧ್ಯವ್ಯವನ್ನು ವ್ಯಕ್ತಪಡಿಸುತ್ತದೆ. 'ರಂಗ ಭಾವಾ' ಎಂದೇ ಸೋಲಿಗರಿಂದ ಸಂಬೋಧನೆ, ಬಿಳಿಗಿರಿರಂಗನಾಥನಿಗೆ ಸೋಲಿಗ ಚೆಲುವೆ ಪುಸುಮಾಲೆ ರಂಗನ ಪ್ರೇಯಸಿಯಾಗಿ ಉಳಿಯದೆ ಮಡದಿಯಾಗಿ ಸ್ವೀಕರಿಸಲ್ಪಟ್ಟಿರುವುದು, ಬಡವರ ನಡುವೆ ರಂಗನೂ ಒಬ್ಬ ಬಡವನಾಗಿ ಬಂದು ಪುಸುಮಾಲೆಯನ್ನು ಮದುವೆಯಾದುದು, ರಂಗನೇ ಅತ್ತೆ ಮಾವನ ಪಾದಪೂಜೆ ಮಾಡಿದುದು (ಈಗಲೂ ಕಮರಿಯಲ್ಲಿ ಅತ್ತೆ ಮಾವನ ಪಾದಪೂಜೆಯ ಸ್ಥಳವಿದೆ) ಮುಂತಾದುವೆಲ್ಲ ಒಂದು ಗೌರವ ಯುತ ಮಧುರ ನಿಕಟ ಬಾಂಧವ್ಯದ ಐತಿಹ್ಯವನ್ನು ನಿರೂಪಿಸುತ್ತದೆ.

ಸೋಲಿಗರು ಪ್ರಕೃತಿಯಾರಾಧಕರು ಎಂದು ಹೇಳಿದೆವಷ್ಟೆ. ದಟ್ಟ ಕಾಡಿನಲ್ಲಿರುವ ದೊಡ್ಡಸಂಪಿಗೆ ಒಂದು ಪುಣ್ಯಕ್ಷೇತ್ರ. ಇಲ್ಲಿ ದೊಡ್ಡ ಸಂಪಿಗೆ ಸ್ವಾಮಿ ಇದ್ದಾನೆ. ಸುಮಾರು 2000 ವರ್ಷದ್ದೆಂದು ಹೇಳಲ್ಪಡುವ ಈ ಮರ ಇಂದಿಗೂ ಕಾಲದಲ್ಲಿ ಹೂ ಬಿಡುತ್ತದೆ. ಹತ್ತಿರದಲ್ಲೆ ಝುಳು ಝುಳು ಹರಿಯುವ ದೊಡ್ಡ ಸಂಪಿಗೆ ಹೊಳೆ ಮರದ ಬುಡವನ್ನು ಮೀಯಿಸಿಯೇ ಹೋಗುತ್ತದೆ. ಪ್ರತಿ ಶುಕ್ರವಾರ ಸೋಮವಾರ ಇಲ್ಲಿ ಪೂಜೆ ನಡೆಯುತ್ತದೆ. ಮಾದೇಶ್ವರ ಲಿಂಗವಲ್ಲದೆ ಇಲ್ಲಿ ಇನ್ನೂ ಪಂದಪ್ಪ ಮುಂತಾದ ದೇವರುಗಳಿದ್ದು ಒಟ್ಟಿಗೆ ಎಲ್ಲವನ್ನೂ ಸೇರಿಸಿ ದೊಡ್ಡ ಸಂಪಿಗೆ ದೇವರು ಎಂದು ಹೇಳುವುದು ವಾಡಿಕೆ.

ಕ್ಯಾತೆ ದೇವರು ಕುದುರೆಯ ಮೇಲೆ ಕೂತು ಆಯುಧಗಳನ್ನು ಹೊತ್ತಿರುವ ದೇವರಾಗಿ ವಿವರಿಸಲಾಗಿದೆ. ಇದು ಬಹುಶಃ ಅರ್ಜುನ ನೊಡನೆ ಹೋರಾಡಿದ ಕಾಡುವಾಸಿಯಾದ ಕಿರಾತನ ಹೋಲಿಕೆಯಿರುವಂತೆ ಕಾಣುತ್ತದೆ. ಯಾರೋ ನಾಡವರೊಡನೆ ಆದಿವಾಸಿ ಪೂರ್ವಿಕರು ಹೋರಾಡಿದ ಪ್ರಸಂಗವೇ ಕಿರಾತ ಪ್ರಸಂಗವಾಗಿ ಈ ಕ್ಯಾತೇ ದೇವರು



ರೂಪುಗೊಂಡಿರಬಹುದು ಈ ಗುಡಿಯಿರುವ ಸ್ಥಳವು ಬಿಳಿಗಿರಿರಂಗನ ದೇವಸ್ಥಾನದಿಂದ ಸುಮಾರು 20 ಕಿ.ಮೀ. ದೂರದಲ್ಲಿದ್ದು ವರ್ಷಕ್ಕೊಮ್ಮೆ ಅಲ್ಲಿ ಹಬ್ಬವು ನಡೆಯುತ್ತದೆ. ಕೇತ ಎಂಬ ಹೆಸರು ಸೋಲಿಗರಲ್ಲಿ ಸರ್ವೆ ಸಾಮಾನ್ಯ.

ಈ ದೇವರುಗಳಲ್ಲದೆ ಸೋಲಿಗರಲ್ಲಿ ಪಂದಪ್ಪ, ಸಿದ್ಧಪ್ಪ, ಹುಲಿವೀರಪ್ಪ ಬಸವೇಶ್ವರ, ಒಂಟಿ ಜಡೆಯ ಕಾರಪ್ಪ ಮುಂತಾದ ಅನೇಕ ದೇವರುಗಳಿದ್ದಾರೆ. ಕಾರಯ್ಯ ಸ್ವಾಮಿ ಸೋಲಿಗರ ಪೂರ್ವಿಕನೆಂಬುದಾಗಿ ಹೇಳಲ್ಪಟ್ಟು ಪೂಜ್ಯ ಸ್ಥಾನ ಪಡೆದಿದ್ದಾನೆ.

ನೂರಾರು ಗಂಡು ದೇವರುಗಳನ್ನು ಸೋಲಿಗರು ಪೂಜಿಸಿದರೂ ಹೆಣ್ಣು ದೇವರುಗಳು ಬಹಳ ಕಡಿಮೆಯೆಂತಲೇ ಹೇಳಬಹುದು. ನಮಗೆ ತಿಳಿದು ಬರುವ ಪ್ರಕಾರ ಮಾರಿಯಮ್ಮ ಮತ್ತು ಮಸಣಮ್ಮ ಸಿಡುಬು ಮತ್ತು ವಾಂತಿಭೇದಿ ದೇವರುಗಳಾಗಿದ್ದು ನಾಡ ಕಡೆಯೂ ಅದೇ ರೀತಿ ಪರಿಗಣಿಸಲ್ಪಡುತ್ತಾರೆ. ಸೋಲಿಗರು ಈ ದೇವರುಗಳನ್ನು ಒಲಿಸದಿದ್ದರೆ ಅವರ ಶಾಪ ತಟ್ಟಬಹುದೆಂದು ಭಯಗೊಳ್ಳುತ್ತಾರೆ. ಈ ವಿಚಾರದಲ್ಲಿ 'ಗೋರ' ಆದಾಗ ವಲಸೆ ಹೋಗುವುದನ್ನು ಹಿಂದೆಯೇ ಚರ್ಚಿಸಲಾಗಿದೆ. ಈ ದೇವರುಗಳಿಗೂ ಹಬ್ಬ ಮುಂತಾದವುಗಳಿಂದ ಶಾಂತಿ ಮಾಡುತ್ತಾರೆ. ಅನೇಕ ಪೋಡು ಹಾಡಿಗಳಲ್ಲಿ ಈ ಮಾರಿ ನೆಲೆಸಿರುವುದು ಕಂಡು ಬರುತ್ತದೆ. ನಮಗೆ ಕಂಡು ಬರುವ ಮಾರಿಯರೆಂದರೆ, ಬಸವನಕಟ್ಟೆ ಮಾರಮ್ಮ (ಬೆಲ್ಲತ್ತ), ಕಟ್ಟೆ ಪಾಳ್ಯದ ಮಾರಿ (ಕಟ್ಟೆ ಪಾಳ್ಯ), ಹಸಿರಳಿಮಾರಿ (ಮುಂಟಿಪಾಳ್ಯ), ಎತ್ತು ಕೊಂಬಿನ ಮಾರಿ, ದಡಸು ಗುಳಿ ಮಾರಿ ಮತ್ತು ಹಲಸಿನಂತ ಮಾರಿ (ಕನ್ನೇರಿ). ಇದಲ್ಲದೆ ಮಲಕಮ್ಮ (ಮಲಕೀ ಬೆಟ್ಟದ ದೇವರು) ಮಾಸ್ತಮ್ಮ (ಮುಂಟಿ ಬೆಲ್ಲತ್ತ) ಮುಂತಾದ ಸ್ತ್ರೀ ದೇವರುಗಳು ಕಂಡುಬರುತ್ತಾರೆ.

## ದೆಯ್ಯ-ಭೂತಗಳು

ಸೋಲಿಗರು ದೆಯ್ಯ ಭೂತ ಪೀಡೆ ಪಿಶಾಚಿ ಗಾಳಿಗಳಲ್ಲಿ ನಂಬುತ್ತಾರೆ. ಇದಲ್ಲದೆ 'ವೀರು' ಎಂಬ ಶಕ್ತಿಶಾಲಿ ದೆಯ್ಯವನ್ನು ಗುರ್ತಿಸುತ್ತಾರೆ. ಮುನಿಗಳ ದೆಯ್ಯಗಳೇ ಮುನೀಶ್ವರಗಳಾಗಿ ಬೆಟ್ಟ, ಮರಗಳಲ್ಲಿ ವಾಸಿಸುತ್ತದೆ. ವೀರು ಮುಸ್ಲಿಮರ ದೆಯ್ಯವೆಂದು ನಂಬಿಕೆ; ಯಾವುದಾದರೂ ಮನುಷ್ಯಾಕಾರ ಕಲ್ಲು ಮುಂತಾದವುಗಳಲ್ಲಿರಬಹುದೆಂದು ನಂಬುತ್ತಾರೆ. ಭೂಮಿಯಲ್ಲಿ ಅಲ್ಲಲ್ಲಿ ಗಾಳಿಗಳು ಇರಬಹುದು. ದೇವರ ತಂಪು ಹೋಗುವಾಗ ಇವು ಅಡ್ಡಹಾಕುತ್ತವೆ. ಇವಕ್ಕೆ ಇಡಿಗಾಯಿ ಹೊಡೆಯಬೇಕು. ನೀರುಭೂತ ಕೊಳಗಳಲ್ಲಿ ಕೆರೆಗಳಲ್ಲಿ ಇರುವುದು. ಇವೆಲ್ಲವೂ ಜನರು ಎಚ್ಚರಿಕೆಯಿಂದಿರದಿದ್ದರೆ ಕಾಟ ಕೊಡುವುದೆಂಬ ನಂಬಿಕೆಯಿದೆ. ಮನುಷ್ಯರು ಸತ್ತ ಮೇಲೆ ಕಲ್ಲು ಗೊಂಬೆಯನ್ನು ಕಲ್ಲುಗುಡಿಗೆ ವರ್ಗಾಯಿಸುವುದರಿಂದ ಅವರಾರು ದೆಯ್ಯಗಳಾಗಲಾರರು ಎಂದೂ ಸೋಲಿಗರು ಹೇಳುತ್ತಾರೆ. ಹಬ್ಬ ಹುಣ್ಣಿಮೆಗಳಲ್ಲಿ ಸ್ವಲ್ಪ ಆಹಾರವನ್ನು ಹೊರಗಡೆ ಚೆಲ್ಲುತ್ತಾರೆ. ಈ ದೆಯ್ಯ ಪೀಡೆ ಪಿಶಾಚಿಗಳು ಶಾಂತವಾಗಲೆಂದು ಈ ಶಾಂತಿ.

## ಸೂಲು

ಸೋಲಿಗರು ಮನುಷ್ಯನಿಗೆ ಎರಡು ಪ್ರಾಣಗಳನ್ನು ಗುರುತಿಸುತ್ತಾರೆ. ಇದನ್ನು ಅವರು ಸೂಲು ಎಂದು ಕರೆಯುತ್ತಾರೆ. ಒಂದು ಮುಖ್ಯವಾದುದು 'ಹುಲು ಸೂಲು'; ಇದೇ ಚಿಕ್ಕ ಸೂಲು. ಮತ್ತೊಂದು ದೊಡ್ಡ ಸೂಲು. ಮನುಷ್ಯ ಸಾಯುವಾಗ ಮುಂಚೆ ದೊಡ್ಡ ಸೂಲು ಹೋಗುವುದು. ನಂತರ ಚಿಕ್ಕ ಸೂಲು ಹೋಗುವುದು. ನಿದ್ರೆಯಲ್ಲಿ ದೊಡ್ಡ ಸೂಲು ಸಂಚಾರ ಹೋಗಿ ಊರೆಲ್ಲಾ ಸುತ್ತಿ ಬರುವುದು. ಆಗ ನೋಡಿದುದು ಕನಸಾಗಬಹುದು. ಆದರೆ ಚಿಕ್ಕಸೂಲು ಅಲ್ಲಿಯೇ ಇರುವುದು. ಇದು ಹೋಗುವುದು ಸಾಯುವಾಗಲೇ. ಸೋಲಿಗರ ನಂಬಿಕೆಯಲ್ಲಿ ಪ್ರಾಣಿಗಳಿಗೂ



ಸಸ್ಯಗಳಿಗೂ, ಜಡವಸ್ತುಗಳಿಗೂ ಸಹ ಸೂಲು ಇರುವುದು. ಆದರೆ ಇಲ್ಲಿ ಇರುವುದು ಒಂದೇ ಸೂಲು. ಒಂದು ಮರ ಕಡಿದು ಅದು ಬೀಳುವಾಗ ಸುಯ್ಯೆಂಬುವ ಶಬ್ದವೇ ಸೂಲು ಹೋಗುವ ಶಬ್ದ. ಆ ತಪ್ಪಿಗೆ ಒಂದು ಕಲ್ಲನ್ನು ಮರದ ಮೇಲಿಟ್ಟು ಅಡ್ಡಬಿದ್ದು ಕ್ಷಮಾಪಣೆ ಕೇಳುವರು. ಈ ಸ್ಪಂದನವು ಇರುವುದರಿಂದಲೆ ಸೋಲಿಗರು ಬೇಕಾಬಿಟ್ಟಿ ನಾಡವರಂತೆ ಮರ ಕಡಿಯಲಾರರು.

ಕಲ್ಲು ಗುಡಿಗೆ ಸೇರಿದ ನಂತರ ಕಲ್ಲುಗೊಂಬೆ (ಆತ್ಮ) ದೆಯ್ಯವಾಗದೆ ಆತ್ಮವು ಅಲ್ಲಿ ನೆಲಸುತ್ತದೆಂಬ ಚಿಂತನೆ ಸೋಲಿಗರಲ್ಲಿರುವಂತೆ ಕಾಣುತ್ತದೆ. ಆದ್ದರಿಂದ ಬಹುಶಃ ಪುನರ್ಜನ್ಮದ ಬಗ್ಗೆ ಅವರು ಪರಿಗಣಿಸುವುದಿಲ್ಲ.

## ಮಾತನಾಡುವ ದೇವರು

ದೇವರು ಮೈ ಮೇಲೆ ಬರುವುದು ಸೋಲಿಗರಲ್ಲಿ ಸರ್ವೇ ಸಾಮಾನ್ಯ. ಸೋಲಿಗರಲ್ಲಿ ಪೂಜಾರಿಗಳಾಗಿ ವಿಶೇಷ ವಿಭಾಗವಿಲ್ಲದಿದ್ದರೂ ಕೆಲವರು ಪೂಜಾದಿಗಳನ್ನು ಮಾಡುತ್ತಿದ್ದು ಅವರಿಗೆ 'ತಮ್ಮಡಿ' ಎಂದು ಹೆಸರು. ಅವರ ಕೆಲಸ ಒಂದು ದೇವರ ಸೇವೆಯೆಂದು ಪರಿಗಣಿಸಲ್ಪಟ್ಟು ಅವರಿಗೆ ವಿಶೇಷ ಮರ್ಯಾದೆಯೂ ಸಲ್ಲುವುದು. ಆದರೂ ಅವರು ಎಲ್ಲರಂತೆ ಹೊಲದ ಕೆಲಸ ಮುಂತಾದುವನ್ನು ಮಾಡಿ ದುಡಿಯುವರು. ಆದಿವಾಸಿ ಜನಗಳ ವೈಶಿಷ್ಟ್ಯವೇ ಇದು. ವಿಶೇಷ ಹಾಡುಗಾರರು, ಮನೆ ಕಟ್ಟುವವರು, ಬಿದಿರು ಹೆಣೆಯುವವರು ಎಂದು ವೃತ್ತಿ ವಿಭಾಗವಿಲ್ಲ. ಎಲ್ಲರೂ ಎಲ್ಲವನ್ನೂ ಸಾಕಷ್ಟು ಮಟ್ಟಿಗೆ ಮಾಡಬಲ್ಲರು.

ದೇವರು ಮೈ ಮೇಲೆ ಬಂದಾಗ ಆ ವ್ಯಕ್ತಿ ಥರಥರ ನಡುಗುವನು. ಅವನಿಗೆ ಕವಚವನ್ನು ಕಳಚಿ ಮೈಗೆ ವಿಭೂತಿ ಬಳಿಯುವರು. ಅವರಿಗೆ ಅದೊಂದು ನೀಲಿ ಪ್ರಭೆ ಕಾಣಿಸುವುದೆಂದು ಹೇಳುವರು. ಆ ವ್ಯಕ್ತಿಯು ಸಂಪೂರ್ಣ ಬೇರೆ ರೀತಿಯೇ ಕಾಣುವನು. ದೇವರ ಕತ್ತಿ (ಗಂಡು ಗೊಡಲಿ)

ಯಿಂದ ಮೈಗೆ ಹೊಡೆದುಕೊಳ್ಳುವನು. ಮುಳ್ಳು ಪಾದುಕೆ ಧರಿಸಿ ನಡೆಯುವನು. ಈ ರೀತಿ ದೈವತ್ವವನ್ನು ತೋರ್ಪಡಿಸುವನು. ನಂತರ ಅವನಿಗೆ ಜನ ಅಡ್ಡ ಬಿದ್ದು ಪ್ರಶ್ನೆ ಕೇಳುವರು. ಮೊದಲಿಗೆ ಅವನ ಮೇಲೆ ಆವಾಹನೆಯಾದ ದೇವರು ತಾನಾರೆಂಬುದನ್ನು, ಯಾವ ದಿಕ್ಕಿನಿಂದ ಬಂದನೆಂಬುದನ್ನೂ ಹೇಳಿ ನಂತರ ಪ್ರಶ್ನೆಗಳಿಗೆ ಉತ್ತರ ಕೊಡುವುದು. ಈ ಲೇಖಕರು ಗಮನಿಸಿದ್ದೇನೆಂದರೆ ದೇವರು ಎಂದೂ ನಕಾರಾತ್ಮಕವಾಗಿ ಉತ್ತರಿಸಲಿಲ್ಲ. ಖಾಯಿಲೆ ಕಸಾಲೆ ಗುಣವಾಗುವುದೆಂಬುದಾಗಿಯೇ ಆಶ್ವಾಸನೆ ಕೊಡುವುದು. ಧೈರ್ಯ ತುಂಬುವುದು. ಗುಣವಾಗುವ ಸತ್ಯ ಸಂಗತಿ, ದೈವಾನುಗ್ರಹ ಹೇಗಾದರೂ ಇರಲಿ. ಇದೊಂದು ಅಪೂರ್ವ ಮನೋಚಿಕಿತ್ಸೆ ಎಂಬುದರಲ್ಲಿ ಸಂಶಯವಿಲ್ಲ. ಇದಕ್ಕಾಗಿ ಧನಾದಿಗಳನ್ನು ವಸೂಲಿ ಮಾಡುವುದಿಲ್ಲ. ವಿಳ್ಯೇದೆಲೆ ಅಡಿಕೆ, ಅಲ್ಪ ಕಾಣಿಕೆಯಿಡಬಹುದು ಅಷ್ಟೇ. ಈ ಮಾತನಾಡುವ ದೇವರು ಆದಿವಾಸಿಗಳ ತೆರೆದ ಮನಸ್ಸನ್ನು, ನಂಬಿಕೆಯನ್ನು ತೋರಿಸಿಕೊಡುತ್ತದೆ. ಇದರಿಂದ ಮಧ್ಯವರ್ತಿಗಳು, ಮಂತ್ರವಾದಿಗಳು, ಪವಾಡಪುರುಷರ ಹಾವಳಿ ಕಡಿಮೆಯಾಗುವುದನ್ನೂ ನಾವು ಗಮನಿಸಬಹುದು. ಇನ್ನು ಕಣಿ ಹೇಳುವುದು, ಗುಂಜೀ ಶಾಸ್ತ್ರ ಸೋಲಿಗ ಜನರೇ ಮಾಡುವುದರಿಂದ ಅಲ್ಲಿ ಶೋಷಣೆ ಇರದು. ಹೀಗೆ ತಮ್ಮದೇ ಸುಲಭ ವಿಧಾನಗಳಲ್ಲಿ ಪೂಜೆ ಪುನಸ್ಕಾರ ವಿಧಿ ಆಚರಣೆಗಳನ್ನು ಈ ಆದಿವಾಸಿ ಜನಾಂಗದವರು ರೂಪಿಸಿಕೊಂಡಿದ್ದಾರೆ.

## ಹಬ್ಬಗಳು

ಸೋಲಿಗ ಹಬ್ಬಗಳು ಅಲ್ಲಿನ ಪರಿಸರಕ್ಕೆ ಹೇಳಿ ಮಾಡಿಸಿದಂತೆ ಇರುತ್ತವೆ. ರೊಟ್ಟಿ ಹಬ್ಬದಲ್ಲಿ ಪಡಿ ಎತ್ತುವರು. ಶುದ್ಧ ನೀರು ಸಿಗುವ ಸ್ಥಳದಲ್ಲಿ ರೊಟ್ಟಿ ತಯಾರಿಸುವ ಕೆಲಸ ನಡೆಯುವುದು. ಇದನ್ನು ಅತ್ಯಂತ ಪವಿತ್ರತೆಯಿಂದ ಮಾಡಬೇಕು. ರೊಟ್ಟಿಗೆ ಉಪ್ಪನ್ನು ಹಾಕರು. ಮುತ್ತುಗದ ಎಲೆಗಳ ಮಧ್ಯೆ



ರೊಟ್ಟಿ ತಟ್ಟಿ ಕೊಂಡದಲ್ಲಿ ಸುಡುವರು. ಇದಕ್ಕೆ ಸೀಗುಂಬಳ ಪಲ್ಯವನ್ನು ಮಾಡುವರು. ದೇವರುಗಳು ಆಹ್ವಾನದ ಮೇಲೆ ಎಲ್ಲ ಕಡೆಗಳಿಂದಲೂ ಬರುವುದು. ತಂಪು (ನಿರ್ಮಲಜಲದ ಅಲಂಕರಿಸಿದ ದೇವರ ಕುಂಡ) ತಂದು ಪೂಜೆ ನಡೆಯುವುದು. ತಂಪು ಹೊತ್ತವರು ಕೊಂಡ ಹಾಯುವರು. ನಂತರ ಎಡೆ, ದೇವರ ಪೂಜೆ, ಎಲ್ಲರಿಗೂ ಊಟ, ಆಗ ರೊಟ್ಟಿ ಬಡಿಸುವರು, ನಂತರ ಇಡಿ ರಾತ್ರಿ ಕುಣಿತ, ಇದು ಬೆಳಿಗ್ಗೆ ಮುಗಿಯುವುದು. ನಂತರ ಬೆಳಗಿನ ಪೂಜೆ, ಮುಕ್ತಾಯ.

ಹೊಸ ರಾಗಿ ಹಬ್ಬವನ್ನು ಸಾಮಾನ್ಯವಾಗಿ ಕುಟುಂಬಗಳು ಹಡಗಿನ ದೇವರಿಗೆ ಮಾಡುವರು. ರಾಗಿ ಮುದ್ದೆ, ಹಲಸಿನಕಾಯಿ ಹುಳಿ, ಪಾಯಸ ತಯಾರಿ ನಡೆಯುವುದು. ಹಾಡು ಕುಣಿತ ಪೂಜೆ ನಂತರ ಇರುವುದು.

ಇನ್ನು ವ್ಯವಸಾಯಕ್ಕೆ ಸಂಬಂಧಪಟ್ಟ ಪೂಜೆಗಳೆಂದರೆ ಭೂಮಿಶಾಂತಿ (ಬಿತ್ತನೆ ಸಮಯದಲ್ಲಿ), ಪೈರು ಪೂಜೆ (ಪೈರು ಸ್ವಲ್ಪ ಬೆಳೆದಾಗ) ಮತ್ತು ಬೂದನ ಹಬ್ಬ (ರಾಗಿ ತೆನೆ ಬಡಿಯುವ ಸಮಯದಲ್ಲಿ) ಆಚರಿಸುವರು. ವ್ಯವಸಾಯದಲ್ಲಿ ಬೆಳೆದ ಮೊದಲ ಫಸಲನ್ನು ದೇವರಿಗೆ ಅರ್ಪಿಸದೆ ತಿನ್ನಬಾರದು.

ಸೋಲಿಗ ಸಮುದಾಯದಲ್ಲಿ ಕೆಲವೆಡೆ, ಜೋಳ ಚೆನ್ನಾಗಿ ಬೆಳೆದಾಗ ಮೂಡು ಸೀಮೆಯಿಂದ ನೆಲದ ಮೇಲೆ ಹೆಜ್ಜೆಯನ್ನೇ ಇಡದ ದೇವ ಪುರುಷರು ಬರುವರೆಂದೂ, ಜೋಳ ತಿನ್ನುವರೆಂದೂ ಆಗ ಅಡ್ಡಿಪಡಿಸಬಾರದೆಂದೂ ಒಂದು ನಂಬಿಕೆಯಿದೆ.

ನಾಡ ಕಡೆಯ ಹಬ್ಬಗಳೂ ಸೋಲಿಗ ಸಂಪ್ರದಾಯಕ್ಕೆ ಸೇರಿಕೊಂಡಿವೆ. ಅವುಗಳಲ್ಲಿ ಮುಖ್ಯವಾದುವೆಂದರೆ ಯುಗಾದಿ, ಗೌರಿ, ದೀವಳಿಗೆ, ಸಂಕ್ರಾಂತಿ, ಶಿವರಾತ್ರಿ. ಯುಗಾದಿ, ದೀವಳಿಗೆ ಸಮಯದಲ್ಲಿ ಜೇನು

ಇಳಿಸುವರು. ಸಂಕ್ರಾಂತಿ ಮುನ್ನಾ ದಿನ 'ಕಟ್ಟುಗಾವಲು' ನಡೆಯುವುದು ಮನೆ ಮನೆಗಳಲ್ಲಿ ವಿಶೇಷವಾಗಿ ರಂಗೋಲಿ ಹಾಕುವರು. ಹಾಡು ಕುಣಿತದ ಸೋಲಿಗ ಯುವ ತಂಡಗಳು 'ಜೋಗಿ' ಸಮೇತ ಕುಣಿತ ಮಾಡುತ್ತಾ ಎಲ್ಲರ ಮನೆಗಳಿಗೂ ಹೋಗುವರು. ಆಗ ಕಾಣಿಕೆಗಳು ಸಲ್ಲುವುವು. ಚಿಗುರುಗಳಿಂದ ಅಲಂಕರಿಸಿಕೊಂಡ ಜೋಗಿ ಕೋಲು ಹಿಡಿದು ಕುಣಿತ ಮಾಡುವ ನೋಟ ಬಲು ಚೆಂದ.

## ತೇರು ಜಾತ್ರೆಗಳು

ಬಿಳಿಗಿರಿ ರಂಗನ ಬೆಟ್ಟದಲ್ಲಿ ನಡೆಯುವ ಚಿಕ್ಕ ಜಾತ್ರೆ ಮತ್ತು ದೊಡ್ಡ ಜಾತ್ರೆಯಲ್ಲಿ ಸೋಲಿಗರಿಗೆ ವಿಶೇಷ ಕಾರ್ಯಗಳು. ದೇವರ ಕೆಲಸವನ್ನು ಅತ್ಯಂತ ಶ್ರದ್ಧೆಯಿಂದ ಮಾಡುವರು (ಇದಕ್ಕೆ ಬಿಟ್ಟಿ ಎನ್ನುವರು). ಬರಿಯ ಸೇವಾಕಾರ್ಯಗಳಲ್ಲದೆ, ಬಿಳಿಗಿರಿ ರಂಗಸ್ವಾಮಿಯನ್ನು, ಆತ ಪುಸುಮಾಲೆಯನ್ನು ಮದುವೆಯಾದ ಸಂದರ್ಭದಲ್ಲಿ ಆತನ ಮೇಲೆ ನುಗ್ಗಿದ್ದಕ್ಕಾಗಿ, ಕ್ಷಮಾಪಣೆ ಕೇಳುವ ಒಂದು ವಿಧಿ ಇಂದಿಗೂ ನಡೆದುಬಂದಿದೆ. ಕಥೆಯ ಪ್ರಕಾರ ಪುಸುಮಾಲೆಯು ತಾನೇ ರಂಗನನ್ನು ಇಷ್ಟಪಟ್ಟು ಮದುವೆಯಾದಳೆಂದು ಹೇಳಿದ ನಂತರ ಅವರು ಬಿಳಿಗಿರಿ ರಂಗಸ್ವಾಮಿಯನ್ನು 'ಭಾವ'ನೆಂದು ಸ್ವೀಕರಿಸುತ್ತಾರೆ. ಇಂದಿಗೂ ಸ್ವಾಮಿಯು ಸೋಲಿಗರಿಗೆ 'ರಂಗಭಾವ'.

ಮೇ-ಜೂನ್ ತಿಂಗಳಲ್ಲಿ ತೆಪ್ಪೋತ್ಸವ ಬರುವುದು. ಇದು ಸುಮಾರು ಒಂದು ವಾರ ಕಾಲ ನಡೆಯುವುದು. ಕಡೆಯ ದಿನದಂದು ರಂಗಸ್ವಾಮಿಯೊಡನೆ ಗಂಗಾಧರ ಸ್ವಾಮಿಯನ್ನು ಕೂಡಿಸಿ ಹರಿಹರ ರೂಪವಾಗಿ ತೆಪ್ಪೋತ್ಸವ ನಡೆಯುವುದು. ಸೋಮರಸನ ಕೆರೆಯಲಿ ನಡೆಯುವ ಈ ತೆಪ್ಪೋತ್ಸವವು ಮನೋಹರ. ಒಮ್ಮೊಮ್ಮೆ ತೆಪ್ಪೋತ್ಸವದ ಕಡೆಯ ದಿನದಂದು ಆವಶ್ಯಕತೆಯಿದ್ದರೆ ರಂಗಸ್ವಾಮಿ ಸನ್ನಿಧಿಯಲ್ಲಿ ಬಾಳೆಹಣ್ಣಿನ ಶಾಸ್ತ್ರದ



ಮೂಲಕ ಸೋಲಿಗ ಯಜಮಾನರ ಆಯ್ಕೆಯೂ ನಡೆಯುವುದು. ಆದರೆ ಸಾಮಾನ್ಯವಾಗಿ ಎಲ್ಲರೂ ಒಂದೇ ಹೆಸರನ್ನು ಒಪ್ಪುವುದರಿಂದ ಈ ಸಂದರ್ಭ ಅಷ್ಟಾಗಿ ಬರಲಾರದು.

ಬಿಳಿಗಿರಿರಂಗನ ಬೆಟ್ಟದಲ್ಲಿ ನಡೆಯುವ ಮತ್ತೊಂದು ಸುಂದರ ರಥವೆಂದರೆ ಗಂಗಾಧರ ಸ್ವಾಮಿ ತೇರು. ತೇರು ಪರಿಷೆ ಎರಡೂ ನಡೆಯುವ ಇಲ್ಲಿನ ವಿಶೇಷ ಪೂಜೆಗೆ ಸುತ್ತಮುತ್ತ ಹಳ್ಳಿಗಳಿಂದಲೂ ಜನ ಬರುತ್ತಾರೆ. ಪ್ರತಿ ಶಿವರಾತ್ರಿ ದಿನ ಇಲ್ಲಿ ತೇರು ನಡೆಯುತ್ತದೆ. ಸರಿಯಾಗಿ ಮಳೆಯಾಗದಿದ್ದರೆ ಇಲ್ಲಿ ಲಿಂಗವನ್ನು ನೀರಲ್ಲಿ ಮುಳುಗಿಸುವುದರಿಂದ ಮಳೆಯಾಗುವುದೆಂಬ ನಂಬಿಕೆಯಿದೆ.

ಮಹದೇಶ್ವರ ಬೆಟ್ಟದ ರಥವೂ ಸೋಲಿಗರಿಗೆ ಅತಿ ಮುಖ್ಯವಾದುದೇ. ಎಲ್ಲ ಕಡೆಗಳಿಂದಲೂ ಸೋಲಿಗರು ಈ ರಥಕ್ಕೆ ಬರುತ್ತಾರೆ. ರಥೋತ್ಸವ ಮಾತ್ರವಲ್ಲದೆ ಇಡೀ ವರ್ಷ ಸೋಲಿಗ ಜನರು ಮಹದೇಶ್ವರ ಬೆಟ್ಟಕ್ಕೆ ಹರಕೆ ಹಬ್ಬ ಪೂಜೆಗಳಿಗಾಗಿ ಹೋಗುತ್ತಲೇ ಇರುತ್ತಾರೆ.

ಮೇಲಿನ ಎರಡು ಧಾರ್ಮಿಕ ಸಂಬಂಧಗಳು ಒಂದು ಆದಿವಾಸಿ ಸಮುದಾಯದ ಮೇಲೆ ಪ್ರಧಾನ ಸಂಸ್ಕೃತಿಯ ನಿಕಟ ಸಂಬಂಧ ಪ್ರಭಾವಗಳನ್ನು ಪ್ರಸ್ತಾಪಿಸಿದರೂ ಈ ಸಂದರ್ಭದಲ್ಲಿ ಶೈವ ವೈಷ್ಣವ ಪ್ರಭಾವಗಳಿದ್ದರೂ ಸೋಲಿಗ ಸಮುದಾಯವು ತನ್ನದೇ ವಿಶಿಷ್ಟ ಹಿನ್ನೆಲೆ ಆಚರಣೆಗಳನ್ನು ಉಳಿಸಿಕೊಂಡಿರುವುದನ್ನು ಗಮನಿಸಬಹುದು.

## ಇಂದಿನ ಸೋಲಿಗ ಸಮುದಾಯ

ಇಂದು ಜಗತ್ತು ಮೂರನೆ ಸಹಸ್ರಮಾನಕ್ಕೆ ಕಾಲಿಟ್ಟು ಭರದಿಂದ ಸಾಗುತ್ತಿರುವ ಸಮಯದಲ್ಲಿ ರಾಜಕೀಯ ಸಾಮಾಜಿಕ ಆರ್ಥಿಕ ನೈತಿಕ ಬದಲಾವಣೆಗಳು ತನ್ನದೇ ಆದ ಗತಿಯಲ್ಲಿ ಸೋಲಿಗ ಸಮುದಾಯಕ್ಕೂ

ಅಡಿಯಿಡುತ್ತಿದೆ. ರಾಜ್ಯ ಮಟ್ಟದ ಗಿರಿಜನ ಸಂಘಟನೆಯನ್ನು ನಿರ್ಮಿಸು ವುದರಲ್ಲಿ ಸೋಲಿಗ ಸಮುದಾಯವು ಒಂದು ಮುಖ್ಯ ಪಾತ್ರವಹಿಸಿದೆ. ಈ ರಾಜ್ಯಮಟ್ಟದ ಸಂಘಟನೆ ಬುಡದಿಂದ ಕಟ್ಟಲ್ಪಟ್ಟು ನಿಜವಾದ ಬುಡಕಟ್ಟು ಸಂಘವಾಗಿದೆ. ಹೇಗೆಂದರೆ ಹಾಡಿ ಪೋಡುಗಳಲ್ಲಿ ಆ ಮಟ್ಟದ ಆದಿವಾಸಿ ಅಭಿವೃದ್ಧಿ ಸಂಘಗಳಿದ್ದು ಸೋಲಿಗ ಸಮುದಾಯದಲ್ಲಿ ಅವು ಸೋಲಿಗ ಅಭಿವೃದ್ಧಿ ಸಂಘಗಳಾಗಿವೆ. ಹಾಗೆಯೇ ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಸಂಘ, ಜಿಲ್ಲಾಮಟ್ಟದಲ್ಲಿ ಜಿಲ್ಲಾ ಸಮಿತಿಗಳಿವೆ. ಈ ಸಂಘಟನೆಗಳು ಗಿರಿಜನ ಅಭಿವೃದ್ಧಿಯಲ್ಲಿ ಕಾರ್ಯನಿರತವಾಗಿವೆ. ಹೀಗೆ ರಾಜ್ಯಮಟ್ಟದ ಸಂಘಟನೆ ಸ್ವತಂತ್ರವಾಗಿ ನಡೆಯುತ್ತಿರುವ ಸಂಘಟನೆಯಾಗಿದೆ. ರಾಜ್ಯಮಟ್ಟದ ಗಿರಿಜನ ಕ್ರಿಯಾಕೂಟವು (ಸ್ವಯಂ ಸೇವಾ ಸಂಸ್ಥೆಗಳ ಒಕ್ಕೂಟ) ಇದಕ್ಕೆ ಒತ್ತಾಸೆ ಯಾಗಿ ಕೆಲಸ ಮಾಡುತ್ತಿದೆ.

ಹೊಸ ಅರಿವಿನ ಅಲೆಯಲ್ಲಿ ಸೋಲಿಗ ಸಮುದಾಯ ಗ್ರಾಮ, ತಾಲ್ಲೂಕು, ಜಿಲ್ಲಾಮಟ್ಟದ ಪಂಚಾಯಿತಿಗಳಲ್ಲಿ ಭಾಗವಹಿಸುತ್ತಿದೆ. ಸೋಲಿಗ ಮಹಿಳೆಯರೇ ಅನೇಕ ಕಡೆ ಮುಖ್ಯ ಪಾತ್ರವಹಿಸಿದ್ದಾರೆ. ಪ್ರಾಥಮಿಕ ಕೇಂದ್ರಗಳಲ್ಲಿ ಅರೆ ವೈದ್ಯಕೀಯ ಕಾರ್ಯಕರ್ತರಾಗಿ, ನರ್ಸ್ ಗಳಾಗಿ ಇನ್ನಿತರ ಜವಾಬ್ದಾರಿಗಳನ್ನು ಸೋಲಿಗರು ವಹಿಸುತ್ತಿದ್ದಾರೆ. ವಿದ್ಯಾಭ್ಯಾಸ ಪಡೆದುಕೊಳ್ಳುವ, ಉಪಾಧ್ಯಾಯರಾಗಿ ಕೆಲಸ ಮಾಡುವ ಯುವಕರು ಮುಂದೆ ಬರುತ್ತಿದ್ದಾರೆ. ಸಾಕಷ್ಟು ಜನರೆಂದು ಹೇಳಲಾಗ ದಿದ್ದರೂ ಅನೇಕರು ಕಾಲೇಜು ಮೆಟ್ಟಲೇರಿ ಅವರಲ್ಲಿ ಕೆಲವರು ಸ್ನಾತಕೋತ್ತರ ಪದವಿ ಪಡೆದಿರುತ್ತಾರೆ. ಒಬ್ಬರು ಈಗ ಪಿ.ಎಚ್.ಡಿ.ಗಾಗಿ ಶ್ರಮಿಸುತ್ತಿದ್ದು ಇನ್ನೇನು ಅದನ್ನು ಪಡೆಯಲಿದ್ದಾರೆ (2009). ವೃತ್ತಿ ತರಬೇತಿ ಯಲ್ಲಿಯೂ ಸೋಲಿಗ ಯುವಕರು ಆಸಕ್ತಿ ತೋರಿಸುತ್ತಿದ್ದಾರೆ. ಲ್ಯಾಂಪ್ ಸೊಸೈಟಿಯಲ್ಲಿ ಭಾಗವಹಿಸುವಿಕೆ ಮಾತ್ರವಲ್ಲದೆ ಗಿರಿಜನ ಕಿರು ಅರಣ್ಯ



ಉತ್ಪನ್ನ ಸಂಸ್ಕರಣ ಕೇಂದ್ರವನ್ನು ಸ್ಥಾಪಿಸಿಕೊಂಡು ಲಾಭವು ಸಮುದಾಯಕ್ಕೆ ಬರುವಂತೆ ಏರ್ಪಡಿಸಿಕೊಂಡಿರುತ್ತಾರೆ. ಪರಿಸರ ಜಾಗೃತಿಯಲ್ಲಿ ಈಗ ಸಮುದಾಯವು ಪ್ರಜ್ಞಾಪೂರ್ವಕವಾಗಿ ಭಾಗವಹಿಸುತ್ತದೆ.

ಸರ್ಕಾರದ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸೋಲಿಗ ಸಮುದಾಯ ಕ್ರಿಯಾತ್ಮಕವಾಗಿ ಭಾಗವಹಿಸುತ್ತಿದೆ. ಕೆಲವು ಕಡೆ ಗಿರಿಜನರು ಜಮೀನನ್ನು ಪಡೆದುಕೊಂಡಿದ್ದಾರೆ. ತೋಟಗಾರಿಕೆ ಮೀನುಗಾರಿಕೆ ಮುಂತಾದ ಇಲಾಖೆ ಗಳ ಫಲಾನುಭವಿಗಳಾಗಿದ್ದಾರೆ. ಇದು ವ್ಯರ್ಥವಾಗದಂತೆ ಸೋಲಿಗ ಸಂಘವು ಜಾಗ್ರತೆ ವಹಿಸುತ್ತದೆ. ಗಿರಿಜನರ ವಾಸದ ಮನೆ ಕಟ್ಟುವಲ್ಲಿ ಸೋಲಿಗ ಯುವಕರು ಪ್ಲಾನ್ ತಯಾರಿಕೆ ಉಸ್ತುವಾರಿ ಇನ್ನಿತರ ಕೆಲಸ ಗಳನ್ನು ನೋಡಿಕೊಳ್ಳಲು ಸಮರ್ಥರಾಗಿ ನಿರ್ವಹಿಸುತ್ತಿದ್ದಾರೆ. ಶೋಷಣೆಗೆ ತಕ್ಕ ಪ್ರತಿಭಟನೆಯನ್ನು ಕೊಡುವ ಶಕ್ತಿ ಹೊಂದಿ ಒಂದು ಬಲಯುತ ಸಮಾಜವಾಗುವ ದಿಸೆಯತ್ತ ನಡೆದಿದ್ದಾರೆ. ಒಟ್ಟಿನಲ್ಲಿ ಸೋಲಿಗ ಜನ ಜೀವನವು ಆಶಾದಾಯಕ ಪ್ರಗತಿಪರ ಮಾರ್ಗದಲ್ಲಿ ಸಾಗುತ್ತಿದೆಯೆಂದು ಹೇಳಬಹುದು.

# ೨. ಸೋಲಿಗ ಜಾನಪದ ಸೊಬಗು

ಆದಿವಾಸಿ ಸಮುದಾಯಗಳ ಜೀವಜಲವಾದ ಸುಂದರ ಸಂಸ್ಕೃತಿಗಳ ಮೂಲರೂಪ ತಿಳಿಯಬೇಕಾದರೆ ಗಂಗೆಯ ಶುಭ್ರ ಸ್ಪಟಿಕ ಜಲವನ್ನು ಹಿಮಾಲಯದಲ್ಲಿ ಕಾಣುವಂತೆ ಈ ಸಮುದಾಯಗಳ ಸಂಸ್ಕೃತಿಯನ್ನು ಜಾನಪದದಲ್ಲಿ ಕಾಣಬೇಕು. ಜಾನಪದವೆಂದರೆ ಮೌಖಿಕ ಪರಂಪರೆಯ ಮೂಲಕ ಹರಿದು ಬಂದಿರುವ ಜನಜೀವನದ ಪ್ರಕಾಶನವೇ. ಜನರ ನಂಬಿಕೆ ವಿಶ್ವಾಸಗಳು ಪ್ರೀತಿ ಭರವಸೆಗಳು, ಪರಸ್ಪರ ಸಂಬಂಧಗಳು. ಪ್ರಕೃತಿ ಯೊಡನೆ ಅಲೌಕಿಕದೊಡನೆ ವಿಶ್ವದ ಸಮಸ್ತ ಜೀವಿಗಳೊಡನೆ ಉಂಟಾದ ಭಾವನೆಗಳು ಇವೆಲ್ಲಾ ಇದರಲ್ಲಿ ಹರಿದಿದೆ. ಇವೇ ಮೌಲ್ಯಗಳಾಗಿ ರೂಪು ಗೊಂಡು ಸಂಸ್ಕೃತಿಯಲ್ಲಿ ಹರಳಾಗಿ ಆಚರಣೆಯಲ್ಲಿ ಬಂದು ಕಲಾತ್ಮಕ ಅಭಿವ್ಯಕ್ತಿ ಹೊಂದಿರುವುದೇ ಜಾನಪದ. ಮನೆ ಮುಂದಿನ ರಂಗೋಲಿಯಲ್ಲಿ ಮನೆ ಗೋಡೆಯ ಗಿಡ-ಮರ ಹುಲಿಹಾವು ಚಿತ್ರಗಳಲ್ಲಿ, ಉಪಯೋಗಿಸಲು ನಿರ್ಮಿಸಿಕೊಂಡ ವಸ್ತುವಿನ್ಯಾಸದಲ್ಲಿ ಮತ್ತು ಅಜ್ಜಿಯರ ನಾರುಬೇರು ಕಷಾಯದಲ್ಲಿ ಸಹ ಹರಿದಿರುವುದನ್ನು ಜಾನಪದವೆನ್ನಬಹುದು. ಜಗತ್ತಿನ ಅನೇಕ ಸಂಸ್ಕೃತಿಗಳು ಕಾಲ ಭೀಮಗದೆಯ ಆಘಾತದಿಂದ ಹೇಳ ಹೆಸರಿಲ್ಲ ವಾಗಿರುವ ಇಂದಿನ ಕಾಲದಲ್ಲಿಯೂ ಕಾಡಾಡಿ ಜನರೆನಿಸಿ ಜಗತ್ತಿನ ಮೊದಲಿಗರಾದ ಆದಿವಾಸಿಗಳಲ್ಲಿ ಮೂಡಿಬಂದ ಈ ಅಪೂರ್ವ ಸರಳ ಸಂಸ್ಕೃತಿಯನ್ನು ಜನಪದದ ಜಾನಪದವು ಕಾಲಪುರುಷನಿಂದ ರಕ್ಷಿಸಿಕೊಂಡು ಬಂದಿರುವುದು ವಿಶ್ವವು ವಿಸ್ಮಯ ಆದರಗಳಿಂದ ಇತ್ತ ಕಡೆ ನೋಡು ವಂತಾಗಿದೆ.

ಎಲ್ಲ ಸಂಸ್ಕೃತಿಗಳಿಗೂ ಮೂಲ ವನಸಂಸ್ಕೃತಿಯೇ. ಇದರಿಂದಲೇ ನಾಡ ಸಂಸ್ಕೃತಿಗಳು ರೂಪುಗೊಂಡು ಸಾಧ್ಯತೆ ಇರುವೆಡೆಯಲ್ಲಿ ನಗರ ಸಂಸ್ಕೃತಿ ಗಳಾಗಿ ಕ್ಲಿಷ್ಟ ಆಯಾಮಗಳನ್ನು ಬೆಳೆಸಿಕೊಂಡಿರುವಂತೆ ಕಾಣುತ್ತದೆ. ಆದರೆ



ನಗರ ಸಂಸ್ಕೃತಿಯು ವಿಕೃತವಾದೆಡೆಯಲ್ಲಿ ಅದು ಸ್ವಯಾರ್ಜಿತ. ಇಂತಹ ವಿಕೃತಿಯು ಗ್ರಾಮೀಣ ಪ್ರದೇಶಗಳು ಹತ್ತಿರವಿರುವುದರಿಂದ ರಸ್ತೆ ಸಂಚಾರ ಗಳು ಹೆಚ್ಚಿರುವುದರಿಂದ ಸಂಪರ್ಕಗಳು ಉತ್ತಮವಾಗಿರುವುದರಿಂದ ದೂರದ ಆ ಗ್ರಾಮ ಸಂಸ್ಕೃತಿಗಳ ಮೇಲೆಯೂ ಸಹ ಸಾಕಷ್ಟು ವಿಪರೀತ ಪರಿಣಾಮಗಳನ್ನು ಉಂಟುಮಾಡಬಹುದು. ಸಂಸ್ಕೃತಿಯು ಜಡವಲ್ಲ ಚೈತನ್ಯ ಸ್ವರೂಪ ಹೊಂದಿರುವುದು. ಇದರ ಅಧ್ಯಯನವೆಂದರೆ ಈ ಚಲನಶೀಲತೆಯನ್ನೊಳಗೊಂಡ ಜನರ ಬದಲಾಗುತ್ತಿರುವ ಜೀವನವನ್ನು ಪ್ರತಿಬಿಂಬಿಸುವ ಸಂಸ್ಕೃತಿಯ ಅಧ್ಯಯನ. ಬದಲಾದ ಜೀವನದ ಪರಿಣಾಮ ವಾಗಿ ಜನರ ಆಚಾರ ವಿಚಾರಗಳೂ ಬದಲಾಗಬಹುದು. ಆದರೂ ಅನೇಕ ಸೂಕ್ಷ್ಮ ಸಂವೇದನಾಶೀಲ ಎಳೆಗಳು ಮೂಲದಿಂದಲೂ ಹರಿದು ಬಂದೇ ಬರುವುದು. ಇದನ್ನು ರಕ್ಷಿಸಿಡುವುದೇ ಜಾನಪದ. ಹಾಗೆಂದಮಾತ್ರಕ್ಕೆ ಜಾನಪದವು ಸ್ಥಗಿತವಾಗಿ ಗತಕಾಲದ ಸದ್ದಾಗುವುದಿಲ್ಲ ಅದು ಹೊಸ ಕಾಲಕ್ಕೂ ಸ್ವಾರಸ್ಯವಾಗಿ ಅರ್ಥಪೂರ್ಣವಾಗಿಯೇ ಇರುವುದು.

## ಜನವಾಣಿಯ ಸಹಜ ಅಭಿವ್ಯಕ್ತಿ

'ಜನವಾಣಿ ಬೇರು, ಕವಿವಾಣಿ ಹೂವು' ಎಂಬುದು 'ಶ್ರೀ'ಯವರ ನುಡಿ. ಇದು ಪೂರ್ಣವಾಗಿ ಸುಲಲಿತವಾಗಿ ಮೂಡಿ ಬರುವ ಸಾಹಿತ್ಯ ವೆಂದರೆ ಜಾನಪದವೇ ಎಂದು ಹೇಳಬಹುದು. ಅತ್ಯಂತ ಸಾಮಾನ್ಯರ ದಿನನಿತ್ಯದ ಜೀವನ. ಆಸೆ ಆಕಾಂಕ್ಷೆಗಳು, ಹಳ್ಳಿಯ ಹೆಣ್ಣಿನ ಬವಣೆ ಆಶೋತ್ತರಗಳು, ಯುವಜನರ ಪ್ರೇಮ, ರೈತನ ನೇಗಿಲ ಉಳುಮೆ, ಕಾಡಿನಲ್ಲಿ ನಡೆಯುವಾಗಿನ ಎಲೆಗಳ ಮರ್ಮರ ಶಬ್ದ, ಅಜ್ಜಿ ತಾತರ ಅನುಭವದ ನುಡಿ, ತಾಯಿಯ ಲಾಲಿ, ಇವೆಲ್ಲವೂ ಸಹಜವಾಗಿ ಮೂಡಿ ಬಂದಿರುವುದು ಜಾನಪದದಲ್ಲಿಯೇ. ಶಿಷ್ಟಸಾಹಿತ್ಯದಲ್ಲಿ ಕಂಡು ಬರುವ 'ಸಿಂಗರದ ಹೊರೆ ಸಡಗರದ ಮಾತುಗಳ ಬಿಂಕ, ಮಂತ್ರದ ಮರೆ'ಯ

ರೂಢಿ ಆವಶ್ಯಕತೆಗಳು ಜಾನಪದವನ್ನು ಬಂಧಿಸುವುದಿಲ್ಲ. ಆದರೆ ಸೂಬಗಿನ ಅಭಿವ್ಯಕ್ತಿಯಂತೂ ಹೊನಲಾಗಿ ಹರಿಯುತ್ತದೆ. ಅದು ಬಹಳ ಸುಂದರ ಸರಳ, ನೇರ ಮತ್ತು ಅಂತರಾಳದ ಹೃದಯಸಂವೇದನೆಯ ಸ್ಪಂದನ! ಬಹುಶಃ ಜಾನಪದವನ್ನು ಸಾಹಿತ್ಯ ಪ್ರಕಾರವೆಂದು ಕರೆಯಲಾಗದು. ಏಕೆಂದರೆ ಅದು ಮಾನವನ ಮೂಲ ಸಾಹಿತ್ಯವೇ! ಮೌಖಿಕ ಪರಂಪರೆಯ ಅಮೂಲ್ಯ ನಿಧಿ.

**ಗ್ರಾಮ ಜೀವನ ಗುರುತಿಸಲು ಜನಪದ**

ಗ್ರಾಮಪಂಚಾಯತಿಯ ಅತ್ಯಂತ ಹಳೆಯದಾದ ಹೆಸರು 'ಜನಪದ' ವೆಂಬುದಾಗಿ ತಿಳಿದುಬರುತ್ತದೆ. ಅಂದರೆ ಇದು ಮಾನವನ ಸಂಸ್ಕೃತಿ ಹಳ್ಳಿಯೇ ಕೇಂದ್ರಬಿಂದುವಾಗಿ ನಡೆದು ಬಂದಂದಿನಿಂದಲೂ ಗ್ರಾಮ ಜನಜೀವನ ಗುರುತಿಸಲು ಒಂದು ಸಾಧನವಾಗಿ ಇರುವಂತೆ ಕಾಣುತ್ತದೆ. ಆದಿವಾಸಿ ಸಂದರ್ಭದಲ್ಲಿ ಇವೇ ಪೋಡು ಹಾಡಿಗಳಾಗಿ ಇದ್ದು ಗ್ರಾಮ ಪಂಚಾಯಿತಿಗಳಿಗೂ ಹಿಂದಿನಿಂದ ಇರುವ ಪಂಚಾಯಿತಿಗಳೆನ್ನಬಹುದು. ಬಹುಶಃ ಇದಕ್ಕೆ ಜನಪದವೆಂಬ ಹೆಸರು ಇನ್ನೂ ಚೆನ್ನಾಗಿ ಒಪ್ಪುತ್ತದೆ. ಜನಪದವು ಪ್ರಕಟಗೊಂಡ ಮಧುರ ವಿಚಾರಧಾರೆಯೇ ಜಾನಪದ.

ಹೀಗೆ ಜಾನಪದವು ಗ್ರಾಮೀಣ ಹಾಗೂ ಆದಿವಾಸಿ ಸಂಸ್ಕೃತಿಯ ಜೀವಾಳವಾಗಿದೆ. ಅದನ್ನು ಅಲಕ್ಷಿಸಿದರೆ ಸಂಸ್ಕೃತಿ ನಶಿಸಿಹೋಗುತ್ತದೆ. ಕಂಡ ಮಟ್ಟಿಗೆ ಈ ಸಂಸ್ಕೃತಿಗಳು ತನ್ನ ಅಂತರಾಳವನ್ನು ಬಿಟ್ಟುಕೊಡದು. ಈ ಕಾರಣದಿಂದಾಗಿ ಹೊರಗಿನದು ಸೇರಬೇಕಾದರೂ ಸಾಕಷ್ಟು ಕಾಲಾವ ಕಾಶವೇ ಬೇಕಾಗುತ್ತದೆ. ಆದರೂ ಕಾಲಾನುಕ್ರಮದಲ್ಲಿ ವಿವಿಧ ಸಂಸ್ಕೃತಿಗಳ ಪ್ರಭಾವವು ಆಗಿಯೇ ಆಗುತ್ತದೆ. ಇದು ಜಾನಪದಕ್ಕೂ ಹರಿದುಬರುತ್ತದೆ.

**ಜಾನಪದ ಜ್ಯೋತಿಗೆ ಸಂಸ್ಕೃತಿ ತೈಲ**

ಗಿರಿಜನ ಸಂಸ್ಕೃತಿಯ ತೈಲದಲ್ಲಿ ದೀಪವಾಗಿ ಬೆಳಗುವ ಅವರ ಜಾನಪದವು ಎಂದಿಗೂ ಆರದ ಜ್ಯೋತಿ. ತಣ್ಣನೆಯ ನೀರಾಗಿ ಚಿಮ್ಮುವ



ಈ ಜೀವಜಲ ಜೀವನದ ಆಳದಿಂದ ಬಂದುದು. ಈ ಚಿಲುಮೆಗೆ ಅಂತ್ಯ ವೆಂಬುದೇ ಇಲ್ಲ. ಜೀವನದ ಎಲ್ಲ ರೀತಿಗಳನ್ನು ಅದೆಷ್ಟು ಬಣ್ಣಗಳಲ್ಲಿ ಪ್ರತಿಬಿಂಬಿಸುತ್ತದೆ ಈ ಗೀತಲಹರಿ! ಈ ರಮ್ಯ ಕಥೆ ಕಾರಣ ಒಗಟುಗಳು! ವಿಪುಲ ಸಾಹಿತ್ಯ, ಸಂಸ್ಕೃತಿ, ಮಾತ್ರವಲ್ಲ ಮನಸ್ಸಿನ ವಿಶ್ಲೇಷಣೆ ಜ್ಞಾನದ ಬೆಳಕು ಆಧ್ಯಾತ್ಮ ಅತಿ ಭೌತಿಕ ಕಲ್ಪನೆಗಳು ಮುಂತಾದ ಗಹನ ವಿಚಾರ ಗಳೂ, ಜನರ ಪರಸ್ಪರ ಸಂಬಂಧ, ವಿವಾಹ, ಪ್ರೇಮ ದಿನನಿತ್ಯದ ಬದುಕು ಬವಣೆಗಳೂ ಮಕ್ಕಳನ್ನು ಲಾಲಿಸುವ ಜೋ ಜೋ ಪದಗಳು ಸಹ ಈ ಜಾನಪದದಲ್ಲಿ ತನ್ನದೇ ವಿಶಿಷ್ಟತೆಯಲ್ಲಿ ಸೇರಿಕೊಂಡುಬಿಡುತ್ತದೆ. ಪಂಚತಂತ್ರದಲ್ಲಿ ಪ್ರಾಣಿಗಳು ಮಾತನಾಡುವ ರೀತಿ ಇಲ್ಲಿ ಹೊರತಲ್ಲ. ಸೋಲಿಗರ ಜಾನಪದದಲ್ಲಿ "ಮಾಯಾದ ಬಲೆ ಮಾಡಗಿದದೆ", "ಇಂದು ಹೋದ ದಾರಿಯಲಿ ನಾಳೆ ಹೋಗಬೇಡಿ" ಎಂದು ಕೂರೆ ಹಂದಿಯು ತನ್ನ ಮರಿಗಳಿಗೆ ಉಪದೇಶವೀಯುತ್ತದೆ.

**ಸೋಲಿಗ ಜಾನಪದ**

ಎಲ್ಲ ಜಾನಪದದಂತೆ ಸೋಲಿಗ ಜಾನಪದವೂ ಸಹ ತಲೆಮಾರಿನಿಂದ ತಲೆಮಾರಿಗೆ ಮೌಖಿಕ ಪರಂಪರೆಯ ಮೂಲಕ ಹರಿದುಬಂದಿರುತ್ತದೆ. ತಾವು ಕೇಳಿದ ತಿಳಿದ ಅನುಭವಿಸಿದ ಆಚಾರ ವಿಚಾರಗಳನ್ನು ನೋವು ನಲಿವುಗಳನ್ನು ಆಸೆ ಆಕಾಂಕ್ಷೆಗಳನ್ನು ಭಯ ಭರವಸೆಗಳನ್ನು ಪ್ರಕೃತಿಯ ಹಿನ್ನೆಲೆಯಲ್ಲಿ ತಮ್ಮದೇ ದೇವರು ದಿಂಡರು ಭೂತ ವೀರುಗಳ ಒಡನಾಟ ದಲ್ಲಿ ಕಥೆಗಳಾಗಿ ಹೆಣೆದು ಗೀತೆಗಳಾಗಿ ಹಾಡಿ, ಓಲಗ, ಒಗಟು ಕಗ್ಗ ಪದ ಗಾದೆಗಳಲ್ಲಿ ತುಂಬಿ ತಮ್ಮ ಜೀವನದಲ್ಲಿ ಹಾಸು ಹೊಕ್ಕಾಗಿ ಮಾಡಿಕೊಂಡರು ಈ ಆದಿವಾಸಿಗಳು. ಹೀಗೆ ಜಾನಪದವು ಸದಾಕಾಲ ಜೀವಂತವಾಗಿಯೇ ಇರುವುದು ಹೊರ ಸ್ವರೂಪ ಬದಲಾದರೂ ಅಂತರಾಳದಲ್ಲಿ ಅದೇ ದನಿ ಮಿಡಿಯುತ್ತಿರುವುದು.

## ಸೋಲಿಗ ಗೀತ ವೈವಿಧ್ಯ

ಸೋಲಿಗ ಗೀತ ಜಾನಪದವನ್ನು ಹಿಡಿದಿಟ್ಟಿರುವ ಸರೋವರ ನದಿ ಕೊಳಗಳೆಂದರೆ ಅವರ ಗೋರುಕಾನ, ಓಲೆಗ, ಆಡುಕೆ ಮತ್ತು ಇನ್ನಿತರ ಗೀತೆಗಳು. ಸಾಮಾನ್ಯವಾಗಿ ಇವೆಲ್ಲವೂ ಕುಣಿತಕ್ಕೆ ಹೇಳಿ ಮಾಡಿಸಿ ದಂತಹವು. ಗೀತೆಗಳಿಗೆ ವಿಷಯವೆಂದರೆ ದೇವರು ಪ್ರಕೃತಿ ಸಮಸ್ತವೂ ಆಗಬಹುದು. ಭಾಷೆ ಭಾವನೆ ದೃಷ್ಟಿಯಿಂದ ಸಾಕಷ್ಟು ನಿರರ್ಗಳವಾಗಿ ಮುಕ್ತವಾಗಿ ಹೊರಹೊಮ್ಮುವ ಗೋರುಕಾನ ಪದಗಳು ಗೋರು ಗೋರುಕೂ ಗೋರುಕಾನಾ ಎಂಬ ಪಲ್ಲವಿಯನ್ನು ಹೊಂದಿರುತ್ತದೆ. ಈ ಗೋರುಕಾನಾ ಎಂಬ ಪಲ್ಲವಿ ಹೇಗೆ ಬಂತು ಎಂದು ಕೇಳಿದರೆ ಹಿರಿಯ ಸೋಲಿಗರು ಗೋರುಕವೆಂದರೆ ಜೇಡವೆಂಬುದಾಗಿ ಬಣ್ಣಿಸುತ್ತಾರೆ. ಜೇಡ ಸುಂದರ ಕಲಾತ್ಮಕ ಬಲೆ ನೇಯುವಂತೆ ಈ ಸೃಷ್ಟಿ ರಚನೆಯೂ ಸಹ ಆಗಿದೆ ಎಂಬ ಅಭಿಪ್ರಾಯ ಅವರಲ್ಲಿರುವಂತೆ ಕಾಣುತ್ತದೆ. ಈ ಪಲ್ಲವಿಯು ಹಾಡನ್ನು ಎತ್ತಿಕೊಡಲು ಹೊಸ ಆಶು ರಚನೆಯನ್ನು ಮಾಡಲು ಸಮಯ ಒದಗಿಸುವುದಲ್ಲದೆ ಹಾಡಿಗೆ ಒಳ್ಳೆ ಲಯವನ್ನು ಒದಗಿಸುತ್ತದೆ.

ಗೀತೆಗಳಲ್ಲಿ ಸಾಮಾನ್ಯವಾಗಿ ದೇವರನ್ನು ಕರೆಯುವ ಪದಗಳು 'ಓಲಗ'ವೆಂಬುದಾಗಿ ಹೆಸರು ಪಡೆದಿದೆ. ಓಲಗವು ಒಳ್ಳೆ ಪ್ರಾಸದಿಂದ ಕೂಡಿದ್ದು ಅತ್ಯಂತ ಲಯಬದ್ಧವಾಗಿ ಸಮತೋಲನ ನುಡಿಗಟ್ಟುಗಳಿಂದ ಕೂಡಿರುತ್ತದೆ. ಹೆಜ್ಜೆ ಹಾಕಲು ಅತ್ಯಂತ ಪ್ರಶಸ್ತವಾಗಿರುತ್ತದೆ. ಮೂರನೆಯ ವಿಧವಾದ 'ಹಾಡುಕೆ'ಯಲ್ಲಿ ನಿರೂಪಣೆ ಪ್ರಶಂಸೆಗಳೊಡಗೂಡಿ ದೇವರ ಸ್ತುತಿಯಿರುವುದು. ಒಮ್ಮೊಮ್ಮೆ ಪ್ರಾಣಿಗಳ ಮೇಲೂ ಹಾಡುಕೆಯಿರು ವುದು. ಪಲ್ಲವಿಯನ್ನು ಮಹಿಳೆಯರು ಹಾಡುವರು. ಸೆಳೆದು ಸೆಳೆದು ಹಾಡುವ ಈ ಪಲ್ಲವಿ ಕೇಳಲು ಅತ್ಯಂತ ಮನೋಹರ! ಕೇಳುಗರು ಅದೇ ಗುಂಗಿನಲ್ಲಿ ಯಾವುದೋ ಲೋಕಕ್ಕೆ ಸಾಗಿಬಿಡುತ್ತಾರೆ. ಹಾಡುಕೆಯ



ಪಲ್ಲವಿಗೆ ಮಹಿಳೆಯರು ದನಿ ಹಿಡಿದರೆ ಹಾಡುಕೆಯ ಸಾಲುಗಳನ್ನು ಸಾಂಗ ವಾಗಿ ಎತ್ತಿಕೊಡುತ್ತಾ ಮುಂದೊಯ್ಯಲು ಒಬ್ಬ ಹಿರಿಯ ಪುರುಷನಿರುತ್ತಾನೆ. ಆತನನ್ನು 'ಗುರು' ಎನ್ನುತ್ತಾರೆ ಹಾಡುಕೆ ಹೇಳುತ್ತಿರಬೇಕಾದರೆ 'ಗುರು'ವಿಗೆ ಮಧ್ಯೆ ಮಧ್ಯೆ 'ಸೊಸ್ತುರಾ' ಬರುತ್ತದೆ (ಅಂದರೆ ದೇವರು ಬರುವುದು) ಆಗ ಪ್ರಶ್ನೋತ್ತರಗಳು ನಡೆಯುತ್ತವೆ. ಬೆಳಗಿನ ಜಾವದಲ್ಲಿ ಹಾಡುಕೆಗಳನ್ನು ದೇವರ ಹೆಸರಿನೊಂದಿಗೆ ಮುಗಿಸುವುದಕ್ಕೆ 'ಗುರು ತೇರು ಬುಡುವುದು' ಎಂದು ಹೇಳುವರು.

ದೇವರ ಪವಾಡಗಳನ್ನು ವರ್ಣಿಸುತ್ತಾ ಪ್ರಶಂಸೆಗಳನ್ನು ಘೋಷಿಸು ವುದು ಕಗ್ಗವೆನಿಸಿಕೊಳ್ಳುವುದು. ಕಗ್ಗಗಳಲ್ಲಿ ಪ್ರತಿ ಕಗ್ಗದ ಕೊನೆಗೂ ಓ ಎಂದು ಆಲುವರು. ಅದು ಜಯಘೋಷ. ವಿಶೇಷವಾಗಿ ಹಬ್ಬಗಳಲ್ಲಿ ತಂಪನ್ನು ತರುವಾಗ ತಂಪಿನ ಮುಂದೆ ಕಗ್ಗ ಹಾಕುತ್ತಾ ಹೋಗುವರು.

ಇದಲ್ಲದೆ ಗಾದೆ ಒಗಟು ಮಕ್ಕಳ ಹಾಡುಗಳು ಮುಂತಾದವೂ ತೊಟ್ಟಿಲ ಲಾಲಿಗಳೂ ಸೋಲಿಗ ಸಮುದಾಯದಲ್ಲಿ ಕಂಡುಬರುವುದು.

## ಒಲುಮೆಯ ಚಿಲುಮೆ

ಸೋಲಿಗ ಜಾನಪದದಲ್ಲಿ ವಿಶ್ವವ್ಯಾಪಿ ವಿಚಾರಲಹರಿಯಿದ್ದರೂ ತನ್ನದೆ ಪುಟ್ಟ ವಿಶ್ವವಾದ ಸ್ಥಳೀಯ ಪರಂಪರೆ ಸಂಸ್ಕೃತಿಗಳ ಪ್ರತಿಬಿಂಬವಾಗಿದೆ. ಅದು ಚೇತನ. ತನ್ನದೇ ಆದ ಭದ್ರ ನೆಲೆಯಿದ್ದರೂ ಸಂಪರ್ಕಗಳಿಂದ ಬದಲಾವಣೆಗಳನ್ನೂ ಹೊಂದಬಹುದು. ಈ ರೀತಿ ಅದು ಜನ ಜೀವನದಲ್ಲಿ ಹಾಸುಹೊಕ್ಕಾಗಿ ಅರಿವಿನ ಬುಗ್ಗೆಯಾಗಿ ಒಲುಮೆಯ ಚಿಲುಮೆಯಾಗಿ ಹರಿಯುತ್ತದೆ.

ಇಂದು ತಿಳಿಯಲ್ಪಡುವ ಜೀವನ ಶೈಲಿ ರೀತಿಯಲ್ಲಿ ನಾಗರಿಕತೆಗಳಲ್ಲಿ ಜಾನಪದವು ಹೊಮ್ಮಲಾರದು. ಅದು ಪ್ರಕೃತಿಯ ಮಡಿಲಲ್ಲಿ. ನಿಸರ್ಗದ ಮಕ್ಕಳಲ್ಲಿ ಮೂಡುವ ರಾಗ.

"ಸೇಬಿನ ಕೊಬೆ ಸೇಬಿನೊವ್ವೆ
ಹನುಕು ಮಳೆಕ ಜಲ್ಲೆಂದೊಲ
ಬೆಟ್ಟ ಸುಳಿಯ ಹೂ ವದೆಲೊ ॥"

(ಸೇಬಿನಕೊಬೆಯ ಸೇಬಿನ ಹೂವು ಹನಿ ಮಳೆಗೆ ಜೆಲ್ಲೆನ್ನುತ್ತಾ ಇದೆ. ಬೆಟ್ಟಗಳಲ್ಲೆಲ್ಲ (ನಾನು) ಸಂಚರಿಸುತ್ತಿದ್ದರೆ ಅರಿಶನ ಬಣ್ಣದ ಬೆಟ್ಟಸುಳ್ಳಿಯ ಹೂವು ಅಲ್ಲೆಲ್ಲಾ ಕಂಗೊಳಿಸುತ್ತದೆ.)

ಆಹಾ! ಇದನ್ನು ಭಾವಿಸುವಾಗ ನಾವೂ ತಂಪು ಮಳೆಯಲ್ಲಿ ನೆಂದ ಅನುಭವವಾಗುತ್ತದೆ.

ಆದರೆ ಅನುಕರಣೆಯಾಗಿ ಬಹುಶಃ ಇತ್ತೀಚಿಗೆ ನಾಗರಿಕತೆಯ ಪದಗಳು ಕೆಲವು ವೇಳೆ ಅದರಲ್ಲಿ ಹರಿಯುವುದುಂಟು.

"ಕೈಕಾ ರೇಡಿಯ ತಬ್ಬಿಸೆಲಾ
ಮೈಸೂರು ಪಾಕ ತಿನ್ನಿಸಲಾ"

(ನಿನ್ನ ಕೈಗೆ ರೇಡಿಯೋವನ್ನು ತಬ್ಬಿಸುತ್ತೇನೆ. ನಿನಗೆ ಮೈಸೂರು ಪಾಕು ತಿನ್ನಿಸುತ್ತೇನೆ. ಯುವಕನು ತಾನು ಇಷ್ಟಪಟ್ಟ ಹೆಣ್ಣಿಗೆ ಹೇಳುವ ಪದ.)

ದೇವರ ಕಲ್ಪನೆ, ಚಿಂತನೆ. ಹಾಡುಗಳಿದ್ದರೂ ಜಾನಪದದಲ್ಲಿ ಜನರ ಬದುಕೇ ಹೆಚ್ಚು ಸನಿಹವಾಗಿದೆ. ದೇವರ ಬಗ್ಗೆ ಹೇಳುವಾಗಲೂ ಪ್ರಕೃತಿ ಮಾನವ ಬದುಕು, ಈ ಹಿನ್ನೆಲೆಯಲ್ಲಿಯೇ ಅತಿ ಭೌತಿಕ ವರ್ಣನೆಗಳೂ ಸಹ ನಡೆಯುತ್ತವೆ.

ಉಚ್ಚವರ್ಗಗಳು, ಶ್ರೀಮಂತ ಹಾಗೂ ಬಲಾಯುತ ಮತ್ತು ಪ್ರಭಾವ ಶಾಲಿ ಸಮುದಾಯಗಳು ಜ್ಞಾನವನ್ನು, ಸಾಮಾನ್ಯರಿಂದ ಹಿಡಿದಿಟ್ಟರೂ ಅನುಭವಾಮೃತದ ಅಪೂರ್ವ ಜ್ಞಾನವನ್ನು ಜಾಣತನವನ್ನು ಕಸಿದುಕೊಳ್ಳ



ಲಾಗಲಿಲ್ಲ. ಆ ರಸವೇ ಧಾರೆ ಧಾರೆಯಾಗಿ ಹೊರಹೊಮ್ಮಿ ಜಾನಪದದಲ್ಲಿ ಹರಿದುಬಂದಿದೆ. ಯಾವ ಬಾಹ್ಯ ಸಾಧನೆಗಳನ್ನು ಮಾಡದಿದ್ದರೂ ಸರಳ ಜೀವನ ಮತ್ತೊಬ್ಬರ ಒಳಿತು ಸತ್ಯ ಮುಂತಾದುವನ್ನು ಸ್ವಾಭಾವಿಕವಾಗಿಯೇ ಅನುಸರಿಸುತ್ತ, ಲೋಭಾದಿ ಗುಣಗಳಿಲ್ಲದೆ ನಿಸರ್ಗದ ಸಂಪತ್ತನ್ನು ಎಷ್ಟು ಕಡಿಮೆ ಬೇಕೋ ಅಷ್ಟನ್ನು ಮಾತ್ರವೇ ತೆಗೆದುಕೊಂಡು, ಸಮುದಾಯ ಜೀವನವನ್ನು ವಿಶ್ವಕುಟುಂಬಿಯ ನಿಜವಾದ ಅರ್ಥದಲ್ಲಿ ಬಾಳುತ್ತಾ ಜೀವನ ನಡೆಸಿದ ಈ ಮುಗ್ಧ ಜನರು ದೈವದಲ್ಲಿ ಅಚಲ ನಂಬಿಕೆಯನ್ನೇ ಇಟ್ಟರು. ಯಾವ ಅಬ್ಬರದ ಪೂಜಾದಿಗಳು, ಡಾಂಬಿಕ ವರ್ತನೆಗಳಿಂದ ದೇವರು ಒಲಿಯನೆಂದು ವಿಶ್ವದ ಅನೇಕ ಮೂಲೆಗಳಿಂದ ಸಾಧಕರು ಸಾರಿದರೋ ಅದನ್ನು ಆದಿವಾಸಿ ಆಶುಕವಿಗಳು ಈ ರೀತಿ ಹಾಡಿದರು:

"ಆಲಿದರೆ ಬಾರನೋ
ಕೂಗಿದರೆ ಬಾರನೋ
ಬೇಡಿ ಬಿನ್ನ ಮಾಡಿದರೆ
ಈಗಾಲೆ ಬರಾನೋ!"

(ಸ್ವಾಮಿಯು) ಅರಚಾಡಿದರೆ ಬರುವುದಿಲ್ಲ, ಕೂಗಾಡಿದರೂ ಸಹ ಬರುವುದಿಲ್ಲ. ಆದರೆ ನಮ್ರತೆಯಿಂದ ವಿನಂತಿಸಿ ಪ್ರಾರ್ಥನೆ ಮಾಡಿದರೆ, ತಕ್ಷಣವೇ ಬಂದು ಬಿಡುತ್ತಾನೆ.

## ಸಂವೇದನಾಶೀಲತೆ

ಗಿರಿಜನ ಸಂಸ್ಕೃತಿಯು ಬಹಳ ಸಂವೇದನಾಶೀಲ ಸಂಸ್ಕೃತಿ. ಮರವೊಂದನ್ನು ಕಡಿದಾಗ ಸುಂಯ್ ಎಂಬುದು ಅದರ ಸೂಲು (ಪ್ರಾಣ) ಬಿಡುವ ಶಬ್ದವೆಂದೇ ಅವರು ಪರಿಗಣಿಸುತ್ತಾರೆ. ಆದ್ದರಿಂದ ಅವರ ಜಾನಪದದಲ್ಲಿಯೂ ಈ ಸಂವೇದನೆಯ ಸೆಲೆಯೇ ಪ್ರವಹಿಸುತ್ತದೆ. ಪರಿಸರವನ್ನು ಬಾಚಿ, ದೋಚಿ ಜೀವನ ಮಾಡುವ ಆಧುನಿಕ ಮಾನವನ

ಗುಣ ಆದಿವಾಸಿಯಲ್ಲಿರಲಿಲ್ಲ. ಅಷ್ಟೇಕೆ? ಪ್ರಕೃತಿಯಲ್ಲಿ ಒಂದು ಹುಲಿಯೂ ಸಹ ಒಂದು ಜಿಂಕೆಯನ್ನೂ ಕಡವೆಯನ್ನೋ ಆಹಾರವಾಗಿ ತಿಂದಮೇಲೆ ಮತ್ತೆ ಹಸಿವಾಗುವವರೆಗೆ ಪ್ರಾಣಿಗಳನ್ನು ಕೊಲ್ಲಲು ಅರಸುತ್ತಾ ಹೋಗುವು ದಿಲ್ಲ. ಹೀಗಿರಬೇಕಾದರೆ ಸಾವಿರಾರು ವರ್ಷಗಳಿಂದ ಅರಣ್ಯದಲ್ಲಿ ಜೀವಿಸಿ, ಅದರ ಮಹತ್ತ್ವವನ್ನು ಅದರ ಉಳಿವಿನಿಂದಲೇ ತಮ್ಮ ಉಳಿವು ಎಂಬು ದನ್ನೂ ಅಂತಃಪ್ರಜ್ಞೆಯಿಂದ ತಿಳಿದಿದ್ದವರು ಗಿರಿಜನರು. ತಮಗೆ ಅಗತ್ಯ ವಾದಷ್ಟು ಬಿಟ್ಟು ಒಂದು ಹುಲ್ಲುಕಡ್ಡಿಯನ್ನೂ ಅರಣ್ಯದಿಂದ ತೆಗೆಯಲಿಲ್ಲ ಈ ಪರಿಸರ ಮಕ್ಕಳು. ಅವರ ಅಗತ್ಯಗಳೋ! ಕೇವಲ ಒಂದು ಗುಡಿಸಲು, ಸಣ್ಣ ವ್ಯವಸಾಯದಿಂದ ರಾಗಿ, ಮುಸುಕಿನ ಜೋಳ, ವ್ಯವಸಾಯದಲ್ಲಿಯೂ ಬರಿ ಕಡಕೋಲು ಬೇಸಾಯವಷ್ಟೆ, ನೇಗಿಲಿನಿಂದ ಉತ್ತವರಲ್ಲ. ಇನ್ನು ಸ್ವಲ್ಪ ಕಿರು ಅರಣ್ಯ ಉತ್ಪನ್ನಗಳು. ಗೆಣಸು ಮೊದಲಾದ ಆಹಾರಗಳು. ಔಷಧಿಗೆ ಕೆಲವು ಸಸ್ಯಗಳು. ಇವನ್ನು ತೆಗೆಯುವ ವಿಧಾನವೋ! ಗೆಣಸಿನಲ್ಲಿ ಒಂದು ಹಂಬು ವಾಪಸು ಬಿಡಲೇಬೇಕು. ನೆಲ್ಲಿಕಾಯಿ ಸೂರ್ಯನ ದಿಕ್ಕಿನಲ್ಲಿ ಎತ್ತರದಲ್ಲಿ ಮುಂತಾಗಿ ಇದ್ದರೆ ಬಿಟ್ಟುಬಿಡಬೇಕು ಔಷಧಿ ಸಸ್ಯಗಳನ್ನು ಪೂರ್ತಿ ಕೀಳ ಬಾರದು. ಸ್ವಲ್ಪ ಬಿಟ್ಟಿರಲೇಬೇಕು. ಈಗ ಬೇಟೆ ನಿಷಿದ್ಧವಾದರೂ ಹಿಂದೆ ಅಪರೂಪವಾಗಿ ಬೇಟೆಯಾಡಿದಾಗ ಸಹ ಪಾಲು ಹಾಕಿಕೊಂಡು ಎಲ್ಲರೂ ಉಪಯೋಗಿಸುತ್ತಿದ್ದರು. ಹೀಗೆ ಕಾಡನ್ನು ಸುಸ್ಥಿತಿಯಲ್ಲಿ ಇಟ್ಟಿದ್ದವರು ಆದಿವಾಸಿ ಜನಗಳೇ! ಪ್ರಾಣಿ ಪಕ್ಷಿಗಳೂ ಬಾಳಲಿ, ಹಣ್ಣು ನೀರು ಅವಕ್ಕೆ ಸಿಕ್ಕಲಿ ಎಂಬ ಭಾವನೆಗಳೂ ಅವರ ಜಾನಪದ ಸಾಲುಗಳಲ್ಲಿ ವಿಪುಲವಾಗಿ ಕಂಡು ಬರುತ್ತದೆ. ಈ ಸಾಲುಗಳನ್ನು ಗಮನಿಸಿ:

ಸಿಪಿಗುಡ್ಡೆ ದಾರಿಯಲ್ಲಿ
ಸಿಪಿಯ ಬೊಗ ಘನ ಬೊಗಲ
ಗೊರು ಗೊರುಕು ಗೊರುಕಾನ!



ಕೊಡನ ಬೆಟ್ಟ ದಾರಿಯಲ್ಲಿ
ಕೊಡನ ಬೊಗ ಘನ ಬೊಗಲ
ಗೊರು ಗೊರುಕು ಗೊರುಕಾನ

ಎಂಜಲುಗೆರೆ ಜಂಜುನೇರಿ
ಅಕ್ಕಿ ಪಕುಕ್ಷಿಕ ದಾನ ಮಾಡಿ
ಗೊರು ಗೊರುಕು ಗೊರುಕಾನ

ಹಳ್ಳ ಹಳ್ಳದ ಪಿಗ್ಗಾನಾಕ್ಕಿ
ಹಳ್ಳದ ನೀರಿಗ ತಲೆ ಬಾಗಿದೆ
ಗೊರು ಗೊರುಕು ಗೊರುಕಾನ

ಸಿಪಿ ಹಕ್ಕಿಗಳಿರುವ ಸ್ಥಳ ಸಿಪಿಗುಡ್ಡೆ. ಅಲ್ಲಿ ಮಾರ್ಗದಲ್ಲಿ ಸಿಪಿಹಕ್ಕಿಗಳ ಕಲರವವೋ ಕಲರವ! ಹಾಗೆಯೇ ಕೋಡನಬೆಟ್ಟ ದಾರಿಯಲಿ ಕೋಡಗಗಳ ಆಟವೋ ಆಟ. ಸ್ವಾಮಿ ಊಟಮಾಡಿ ಕೈತೊಳೆದ ಕೆರೆ ಎಂಜಲುಗೆರೆ. ಅಲ್ಲಿ ಜಂಬು ನೇರಳೆ ಮರಗಳು ಹಣ್ಣುಗಳಿಂದ ಸಮೃದ್ಧವಾಗಿ ಹಕ್ಕಿಪಕ್ಷಿಗಳಿಗೆ ಧಾರಾಳವಾಗಿ ದಾನಮಾಡಿ ಹಣ್ಣುಗಳನ್ನು ನೀಡುತ್ತಿವೆ. ಹಳ್ಳಹಳ್ಳದಲ್ಲಿ ಪಿಗ್ಗಾನಕ್ಕಿ(ಹಕ್ಕಿ)ಗಳು ನೀರನ್ನು ಕುಡಿಯಲು ತಲೆ ಬಾಗಿವೆ.

ಇಂತಹ ಮನೋಹರ ದೃಶ್ಯವು ಇಲ್ಲಿ ಚಿತ್ರಿತವಾಗಿದೆ.

## ಪ್ರೇಮ ಪರಾರಿ

ಪ್ರೇಮವು ಆದಿವಾಸಿ ಜಾನಪದದ ಹೃದಯಾಂತರಾಳ ಭಾವನೆಯ ಮೆರುಗು. ಅವರ ಸಂಸ್ಕೃತಿಯಲ್ಲಿಯೇ ಗಂಡು ಹೆಣ್ಣು ಪ್ರೇಮಿಸುವ ಮದುವೆಯಾಗುವ ರೀತಿ ಅತಿ ವಿಶಿಷ್ಟ. ಬಲವಂತದ ಮದುವೆಗಳು ಅಲ್ಲಿಲ್ಲ. ಇನ್ನೂ ಹದಿವಯಸ್ಸಿನ ಹುಡುಗ ಹುಡುಗಿಯರೇ ಒಬ್ಬರನ್ನೊಬ್ಬರು ಇಷ್ಟಪಟ್ಟು ಕಾಡುಮೇಡಿನಲ್ಲಿ ಅಲೆಯುತ್ತಾರೆ. ಹಣ್ಣು ಜೇನನ್ನು ಹಂಚಿಕೊಳ್ಳು

ತ್ತಾರೆ. ಹೀಗೆ ಅವರು 'ಪಳಗುತ್ತಾರೆ'. ನಂತರ ಒಂದು ದಿನ ಅವಳು ನೀರಿಗಂತ ಬಂದಾಗ, ಅವನು ಕಾಡಿಗೆಂದು ಬಂದು ಇಬ್ಬರು ಪರಾರಿಯಾಗುತ್ತಾರೆ.

ಕಣ್ಣ ನೋಡಿ ಕಪ್ಪ ತನ್ನೆ
ಬೆನ್ನನೋಡಿ ರೊಯಿಕೆ ತನ್ನೆ
ನಿನ್ನ ನೋಡಿ ನಾನು ಬಂದೆಣ್ಣೆ ।।
ಚೆಂದುಳ್ಳಿ ಚೆಲುವೆ
ನಿನ್ನ ನೋಡಿ ನಾನು ಬಂದೆಣ್ಣೆ।।

ಸೌದೆಗೆಂತ ನೀನು ಬಾರೊ
ಸೊಪ್ಪಿಗೆಂತ ನಾನು ಬಾರುವೆ
ದಾರಿತಪ್ಪಿ ಮಾತನಾಡೋಣ।

ಚೆಂದುಳ್ಳಿ ಚೆಲುವ
ದಾರಿತಪ್ಪಿ ಮಾತನಾಡೋಣ।।

ಹೀಗೆ ಈ ಪ್ರೇಮಿಗಳು ಯಾವುದಾದರೂ ದೂರದ ಪೋಡಿನಲ್ಲಿ ಸೇರಿ ಇರುತ್ತಾರೆ. ಅವರನ್ನು ಯಜಮಾನರು ಪತ್ತೆ ಹಚ್ಚಿ ಅವರನ್ನು ಕರೆದು ತಂದು ನ್ಯಾಯಮಾಡಿ 12½ ರೂ. ದಂಡ ವಿಧಿಸುತ್ತಾರೆ. ನಂತರ ಅವರು ಗಂಡಹೆಂಡಿರಾಗಿ ಬಾಳುತ್ತಾರೆ ಸಾಮಾನ್ಯವಾಗಿ ಇದಕ್ಕೆ ಅಡೆತಡೆಗಳು, ಕಟ್ಟಲೆಗಳು ಯಾವುವೂ ಮಧ್ಯೆ ಬರುವುದಿಲ್ಲ. ಅವರು ಒಂದೇ ಕುಲದವರಾಗಿರಬಾರದು ಅಷ್ಟೆ.

ಯಾವ ತಾಳಮೇಳಗಳಿಲ್ಲದೆ, ಬಾಜಾ ಭಜಂತ್ರಿಗಳಲ್ಲದೆ, ನಿಸರ್ಗದ ಮಡಿಲಲ್ಲಿ ಹಕ್ಕಿಗಳ ಇಂಚರದಲ್ಲಿ, ತರಗೆಲೆಗಳ ಮರ್ಮರದಲ್ಲಿ ಗಿರಿ ಝರಿಗಳ ಜುಳು ಜುಳು ನಿನಾದದಲ್ಲಿ ನಡೆಯುವ ಈ ಮದುವೆ ಎಷ್ಟು ಮನೋಹರ!



(ಆದರೆ ಇತ್ತೀಚೆಗೆ ಸಾಕಷ್ಟು 'ನಾಗರಿಕತೆ'ಯ ಪ್ರಭಾವ ಆಗಿದೆ. ಲಗ್ನಪತ್ರಿಕೆಗಳು ಪ್ರಿಂಟಾಗಿ ಸಾಧ್ಯವಾದಷ್ಟೂ ದೊಡ್ಡ ದನಿ ಇರುವ ಧ್ವನಿ ವರ್ಧಕಗಳನ್ನು ಜಾಡಿಸಿ, ಸಾಲಸೋಲಮಾಡಿ ಖರ್ಚು ಮಾಡುವ ಅನೇಕ ಮದುವೆಗಳು ನಾಡಮದುವೆಯ ಯಥಾರೂಪವಾಗಿಯೇ ಇರುವ ಹಾಗಿದ್ದು ಹಳೆಯ ಕಾಲದ ಮಧುರ ಭಾವವನ್ನು, ಸ್ವಂತಿಕೆಯನ್ನು ಕಳೆದು ಕೊಳ್ಳುವಂತೆ ಕಾಣುತ್ತಿದೆ).

## ಸೋಲಿಗ ವಾದ್ಯಗಳು

ಸೋಲಿಗ ವಾದ್ಯಗಳೆಂದರೆ ಮುಖ್ಯವಾಗಿ ತಮಟೆ ಮತ್ತು ಪಿನಾಶಿ. ಈ ಎರಡು ವಾದ್ಯಗಳನ್ನು ಅವರೇ ತಯಾರಿಸಬಲ್ಲರು. ಪ್ರಾಣಿಗಳ ಚರ್ಮ ಹದ ಮಾಡಿ ತಮಟೆ ತಯಾರಿಸಿದರೆ ಪಿನಾಶಿಯನ್ನು ತಯಾರಿಸಲು ಬಿದಿರನ್ನು ಉಪಯೋಗಿಸುತ್ತಾರೆ. ಈ ಪಿನಾಶಿವಾದ್ಯ ಉಸಿರಿನ ವಾದ್ಯವಾಗಿದ್ದು ಹಾವಾಡಿಗರ ಪುಂಗಿಯಂತೆ ಶಬ್ದ ಕೇಳಿಸುತ್ತದೆ. ಹಾವನ್ನು ಮಂತ್ರಮುಗ್ಧ ಮಾಡುವಂತೆ ಪಿನಾಶಿ ವಾದ್ಯವು ಗಿರಿಜನರನ್ನು ಆಕರ್ಷಿಸಬಲ್ಲುದು. ಅದಕ್ಕೆ ತಕ್ಕಂತೆ ವಾಲಿ ಕುಣಿಯುವಾಗ, ನಿಧಾನವಾಗಿ ನರ್ತಿಸುವಾಗ ಅದೇನು ಶಾಂತತೆ! ನರಗಳೆಲ್ಲ ತೃಪ್ತಿ ಹೊಂದಿ ಶಾಂತ ಸ್ಥಿತಿಗೆ ಬರುವಂತೆ ಅನ್ನಿಸುತ್ತದೆ. ಆಧುನಿಕ ಥಕಥೈ ಕುಣಿತಗಳಿಗೆ ಪರ್ಯಾಯವಾಗಿ ಇಲ್ಲಿ ನಿಧಾನ ಸುಂದರ ಕೈ ಮೈ ಚಲನೆಗಳಿದ್ದು ನೋಡುಗರ ಮೇಲೆ ಮಹತ್ತ್ವ ಪರಿಣಾಮ ಉಂಟು ಮಾಡುತ್ತದೆ. ಮನಸ್ಸನ್ನು ಶಾಂತಸ್ಥಿತಿಗೆ ತರಲು ಯೋಗ ಮುಂತಾದವನ್ನು ಅವಲಂಬಿಸುವ ಈ ಕಾಲದಲ್ಲಿ ಸೋಲಿಗ, ಯರವ ಮುಂತಾದ ಪಂಗಡಗಳಲ್ಲಿ ನಿಧಾನ ಸುಂದರ ಕೈ ಮೈ ಚಲನೆಯ ಕುಣಿತಗಳ ಬಗ್ಗೆಯೂ ಮನೋವಿಜ್ಞಾನ ಸಂಶೋಧಕರು ಗಮನಹರಿಸಲು ಸಾಧ್ಯತೆಗಳಿವೆ. ಈ ವಾದ್ಯಗಳಲ್ಲದೆ ತಾಳ, ಕೊರಳು ಮತ್ತು ದುಡಿಯನ್ನೂ ಕೆಲವು ಕಡೆ ಉಪಯೋಗ ಮಾಡುತ್ತಾರೆ.

ಆದಿವಾಸಿ ಸಂಸ್ಕೃತಿಯಲ್ಲಿ ಪ್ರತ್ಯೇಕ ಹಾಡುಗಾರರು ಮತ್ತು ಕೇಳುಗರು ಎಂಬುದಾಗಿರುವುದಿಲ್ಲ. ಎಲ್ಲರ ಭಾಗವಹಿಸುವಿಕೆ ಇರುತ್ತದೆ. ಆದರೂ ಕೆಲವರು ವಿಶೇಷವಾಗಿ ಗಾಯಕರು ಇರುವುದುಂಟು. ಅಲೆಯುವ ಗಾಯಕರು ಇಲ್ಲದಿಲ್ಲ. ಬಿಳಿಗಿರಿ ರಂಗನ ಬೆಟ್ಟದಲ್ಲಿ ಲಕುಮನ ಕೇತೆಗೌಡರು ಇಂತಹ ಗಾಯಕ ಕಥೆಗಾರರಾಗಿದ್ದರು. ಎಲ್ಲರ ಮೆಚ್ಚುಗೆ ಗಳಿಸಿದ್ದರು.

## ಪ್ರಕೃತಿಯ ಬಗ್ಗೆ ಕೃತಜ್ಞತೆ

ಆದಿವಾಸಿ ಸಂಸ್ಕೃತಿಯಲ್ಲಿ ಎದ್ದು ಕಾಣುವ ಅಂಶವೆಂದರೆ ಪ್ರಕೃತಿಯ ಬಗ್ಗೆ ಕೃತಜ್ಞತೆ. ನಿಸರ್ಗದ ಮಡಿಲಲ್ಲಿ ಹುಟ್ಟಿ, ಪ್ರಕೃತಿ ತಾಯಿಯಿಂದಲೇ ಪೋಷಿತರಾಗಿ ಜೀವಿಸಿದ ಆದಿವಾಸಿಗಳು ತಮ್ಮ ಜೀವನ ಸರ್ವಸ್ವವಾದ ಪ್ರಕೃತಿಗೆ ಏನು ಕಡಿಮೆ ಕೃತಜ್ಞರೇ! ಅದರಲ್ಲಿಯೂ ತಮ್ಮ ಜೀವ ಪೋಷಣೆಯ ವಿಚಾರಕ್ಕಾಗಿ ಮಾತ್ರವಲ್ಲದೆ ನಿಸರ್ಗದೊಡನೆ ಅವರ ಸಂಬಂಧ ಅಪೂರ್ವ; ಆಳ; ಅನಿರ್ವಚನೀಯ; ಸರಿಯಾಗಿ ಹೇಳ ಬೇಕೆಂದರೆ ಅದು ಆಧ್ಯಾತ್ಮಿಕ.

ಆದ್ದರಿಂದ ಅವರು ತಮ್ಮ ದೇವರನ್ನೂ ಸಹ ಪ್ರಕೃತಿಯಲ್ಲಿಯೇ ಕಂಡು ಕೊಂಡರು. ದೊಡ್ಡ ಸಂಪಿಗೆ ಮರವನ್ನೇ ಪೂಜಿಸಿದರು.

"ಮರಕೊಂದಾರತಿ ಎಲೆಗಳ ಪೂಜೆ
ಅಪಾದೂಪ ದೇವರಿಗ॥"

ಗುಡಿಗೋಪುರಗಳು, ಅಮೃತ ಶಿಲೆಯ ಅಲಂಕಾರಗಳು ಅವರಿಗೆ ಬೇಕಾಗಲಿಲ್ಲ. ಬಳ್ಳಿಗಳು ಮೆಳೆಗಳಲ್ಲಿ ತೂಗುತ್ತಿರುವುದು ಅವರಿಗೆ ಸ್ವಾಮಿಯು ಅದರಲ್ಲಿ ತೂಗುತ್ತಿರುವಂತೆ ಕಂಡಿತು:

"ಜೋಲಿ ಬಿದ್ದಾದೋ ಮೆಳೆಮೇಲೇಲಾ"



## ಜಾನಪದದಲ್ಲಿ ಇತಿಹಾಸ

ಜಾನಪದವು ಮಧುರ ಗೀತ ಕಥೆಗಳೊಡನೆ ಇತಿಹಾಸವನ್ನು, ಸ್ಥಳ ಪುರಾಣವನ್ನು, ಸೋಲಿಗರ ಮೂಲವನ್ನೂ ಅನೇಕ ವೇಳೆ ದೊರಕಿಸಿ ಕೊಡುತ್ತದೆ. ಬಿಳಿಗಿರಿ ರಂಗಸ್ವಾಮಿಯ ಕಥೆಯಲ್ಲಿ ಹೇಗೆ ಸೋಲಿಗರ ಹೆಣ್ಣು ಪುಸುಮಾಲೆ ರಂಗನಿಗೆ ಮಡದಿಯಾಗಿ ರಂಗನು ಅವರಿಗೆ ಭಾವನೇ ಆದ ಐತಿಹ್ಯವಿದೆ. ಆದ್ದರಿಂದಲೇ ರಂಗಸ್ವಾಮಿಯ ತೇರಿನ ದಿವಸಗಳಲ್ಲಿ 'ಬಿಟ್ಟಿ' (ದೇವರಿಗಾಗಿ ಕೆಲಸ) ಮಾಡುವ ಸೋಲಿಗರು ಅಂದು ಎಲ್ಲ ಕೆಲಸ ಬದಿಗಿಟ್ಟು ಇದನ್ನೇ ನೆರವೇರಿಸುತ್ತಾರೆ. ಈ ಐತಿಹ್ಯ ವಿಶೇಷ ಸ್ಥಳಗಳೂ ಅಲ್ಲಲ್ಲಿಯೇ ಇರುತ್ತವೆ. ಕಮರಿ, ಅತ್ತೆಮಾವರ ಪೂಜೆ ಮಾಡಿದ ಜಾಗ, ರಂಗ ಪುಸುಮಾಲೆಯರು ಇದ್ದ ಗುಹೆ — ಹೀಗೆ ಅನೇಕ ಸ್ಥಳಗಳು ಮಹತ್ತ್ವದಾಗಿದ್ದು ಸೋಲಿಗರ ಬಾಳಿನಲ್ಲಿ ಹಾಸುಹೊಕ್ಕಾಗಿದೆ.

ಸಂಕಮ್ಮನ ಕಥೆಯಲ್ಲಿ ಸೋಲಿಗ ನೀಲಯ್ಯ ಸಂಕಮ್ಮನನ್ನು ಮೆಚ್ಚಿ ಮದುವೆಯಾದುದು, ನಂತರ ಜೇನಿಗಾಗಿ ಹೋಗಲು ಸಂದರ್ಭ ಬಂದಾಗ ಸಂಶಯ ಪಿಶಾಚಿ ಮೆಟ್ಟಿಕೊಂಡಿದ್ದ ಅವನು ಸಂಕಮ್ಮನನ್ನು ಮುಳ್ಳು ನಾರು ಗಳಿಂದ ಬಂಧಿಸಿ ಘೋರ ಬಂಧನದಲ್ಲಿಟ್ಟು ಅಡವಿಗೆ ತೆರಳಿದುದು, ಮಹದೇಶ್ವರ ಸ್ವಾಮಿಗಳ ಆಗಮನ, ಅವರ ಕೃಪೆಯಿಂದ ಕಾರಯ್ಯ ಬಿಲ್ಲಯ್ಯ ಮಲ್ಲಯ್ಯ ಎಂಬ ಮಕ್ಕಳಾದುದು. ಗುಡಿಸಲು ಅರಮನೆಯಾದುದು, ತನಗೆ ಮಕ್ಕಳನ್ನು ಭಿಕ್ಷೆಯಾಗಿ ಕೊಡಬೇಕೆಂದು ಮಾದೇಶ್ವರರು ಕೇಳಿದುದು, ನಂತರ ನೀಲಯ್ಯನೂ ಒಪ್ಪಿ ಮಕ್ಕಳಲ್ಲಿ ಕಾರಯ್ಯ ಬಿಲ್ಲಯ್ಯರನ್ನು ದತ್ತು ದಾನವಾಗಿ ಕೊಟ್ಟಿದುದು, ಈ ಕಥೆಯೆಲ್ಲ ಬರುತ್ತದೆ. ಕಾರಯ್ಯನೇ ತಮ್ಮ ಮೂಲ ಪುರುಷ ಎಂದು ಸೋಲಿಗರು ಹೇಳುತ್ತಾರೆ.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವೆಂದರೆ ನೀಲಯ್ಯ ಹೆಂಡತಿಗೆ ಕೊಡುವ ಅಮಾನುಷ ಶಿಕ್ಷೆ. ಆದಿವಾಸಿ ಜನಜೀವನದಲ್ಲಿ ನ್ಯಾಯ

ಪಂಚಾಯಿತಿಯಲ್ಲಿ ಶಿಕ್ಷೆಗಳು ಇರುತ್ತಿದ್ದರೂ, ಗಂಡ ಹೆಂಡತಿಗೆ ಈ ರೀತಿ ಸಂಶಯಿಸಿ ಬಂಧನದಲ್ಲಿ ಇರಿಸುವ ಪ್ರಸಂಗ ಪುರುಷ ಪ್ರಧಾನ ಜನ ಜೀವನಗಳ ಪ್ರಭಾವ ಅಲ್ಲಲ್ಲಿ ಈ ಸರಳಜೀವಿಗಳ ಮೇಲೂ ಅನುಕರಣೆ ಯಲ್ಲಿ ಹುಟ್ಟಿ ಆಗಿರಬಹುದೆಂಬ ಸಂಶಯ ಮೂಡಿಸುತ್ತದೆ. ಹಾಗೆಯೇ ಮಕ್ಕಳನ್ನು ಕೂದು (ಕೊಯ್ದು) ಅಡಿಗೆ ಮಾಡಿ ಬಡಿಸಿ, ನಂತರ ಮಾದೇಶ್ವರರು ಕರೆದಾಗ ಜೀವಂತವಾಗಿ ಬರುವ ಘಟನೆಯು ಭಕ್ತ ಸಿರಿಯಾಳ ಮುಂತಾದ ಸಾಂಪ್ರದಾಯಿಕ ಕಥೆಗಳ ಪ್ರಭಾವದಂತೆ ಕಂಡು ಬರುತ್ತದೆ. ಏಕೆಂದರೆ ಆದಿವಾಸಿ ಸಂಸ್ಕೃತಿಯಲ್ಲಿ ಅದ್ಭುತಗಳಿಗೆ ಸ್ಥಾನ ವಿದ್ದರೂ ಜೀವನದಿಂದ ದೂರವಾದ ಅತಿ ಕ್ರೌರ್ಯ ವಿಚಿತ್ರಗಳು ಮುಂತಾದವುಗಳಿಗಿಂತಲೂ ಅವರು ಜೀವನಕ್ಕೆ ಹತ್ತಿರವಾದ ನೈಜ ನೆಲೆ ಯಲ್ಲಿ ಬಾಳಿರುವುದು ನಮಗೆ ಕಂಡುಬರುತ್ತದೆ.

ಕಾಲದಿಂದ ಕಾಲಕ್ಕೆ ಬದಲಾದ ಐತಿಹಾಸಿಕ ಘಟನೆಗಳಿಂದಲೋ ಪೌರಾಣಿಕ ವಾಖ್ಯೆಗಳಿಂದಲೋ ಉಂಟಾದ ಪರಿಣಾಮಗಳನ್ನು ಗುರುತಿಸಲು ಮಾನವ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಅಭ್ಯಸಿಸಲು ಜಾನಪದವು ಮುಖ್ಯ ಆಧಾರವೆಂದು ಹೇಳಿದವಷ್ಟೆ. ಒಂದೊಂದು ಕಲ್ಲಿಗೂ ಕಥೆ ಹೇಳುವ ಈ ಸಾಧನದಿಂದಲೇ ಅನೇಕ ಆಚಾರ ವಿಚಾರಗಳನ್ನು ಅರ್ಥೈಸಿ ವ್ಯಾಖ್ಯಾನಿಸುವ ಪ್ರಯತ್ನ ನಡೆಯುತ್ತಿದೆ. ಹಾಗೆಯೇ ಸಾಂಸ್ಕೃತಿಕ ಇತಿಹಾಸದ ಮೇಲೆ ಬೆಳಕು ಚೆಲ್ಲಲು ಜಾನಪದ ಅಧ್ಯಯನ ಮಹತ್ತ್ವ ಪಡೆಯುತ್ತದೆ.

ಈ ನಿಟ್ಟಿನಲ್ಲಿ ಎಲ್ಲಕ್ಕಿಂತಲೂ ವಿಶೇಷ ಆಸಕ್ತಿ ಕೆರಳಿಸುವ ಐತಿಹ್ಯ ಕಥೆ ಯೆಂದರೆ ಮೋರಿಯರ ಕಥೆ. ಈ ಮೋರಿಯರು ಸಾವಿರಾರು ವರ್ಷಗಳ ಹಿಂದೆ ಬಾಳಿದವರು. ಕುಬ್ಜ ಜನರು. ಕಲ್ಲುಗಳಲ್ಲಿ ಮನೆ ಕಟ್ಟಿಕೊಳ್ಳುತ್ತಿದ್ದರು. ಕೆಂಡದ ಮಳೆ ಸುರಿದು ಇವರು ನಾಶವಾದರು. ಕಲ್ಲುಗಳು ಉಳಿದವು.



ಅವರು ಕಲ್ಲಿನ ಅರಮನೆಯೆಂದು ಕರೆದರೂ ಬಹುಶಃ ಸಮಾಧಿಯೋ ಅಥವಾ ಅಂತಹ ಉದ್ದೇಶಕ್ಕಾಗಿ ಗುಂಡಾಗಿ ಜೋಡಿಸಿರುವ ಕಲ್ಲುಗಳ ಪ್ರದೇಶವನ್ನು ಇಂದಿಗೂ ನಾವು ಬಿಳಿಗಿರಿರಂಗನ ಬೆಟ್ಟದಲ್ಲಿ ಕಾಣಬಹುದು. ಕೆಂಡದ ಮಳೆ ಎಂದರೆ ಬಹುಶಃ ಯಾವುದೋ ವಿಶಿಷ್ಟ ಕಾಡಾಗ್ನಿಗೆ ಈ ಪೂರ್ವಿಕರು ಬಲಿಯಾಗಿರಲು ಸಾಕು.

'ಈ ಪ್ರಪಂಚ ಹುಟ್ಟಿದ ಕಥೆ'ಯಲ್ಲಿ ಮೊದಲು ಎಲ್ಲೆಲ್ಲಿಯೂ ನೀರಿತ್ತು. ನಂತರ ಅದರಿಂದ ಜೀವಿಗಳು ಹುಟ್ಟಿದವು ಎಂಬ ವಿಚಾರ ಆದಿವಾಸಿ ಗಳಲ್ಲಿಯೂ ಕಲ್ಪನಾಶಕ್ತಿ, ಯೋಚನಾಲಹರಿ ಚೆನ್ನಾಗಿಯೇ ಹರಿದಿದೆ ಎಂದೆನಿಸುವಂತೆ ಮೂಡಿಬಂದಿದೆ. ಈ ಕಥೆಯಲ್ಲಿ ಪ್ರಧಾನ ಸಂಸ್ಕೃತಿಯಲ್ಲಿ ಕೇಳಿಸುವ ಎಲ್ಲೆಲ್ಲಿಯೂ ನೀರು ತುಂಬಿದ್ದ ಸೃಷ್ಟಿ ಮೂಲದ ಕಥೆಯೂ ಇಂತಹ ವಿಚಾರಗಳ ಮೂಲಕ ಉತ್ಪತ್ತಿಯಾಗಿರಬಹುದು. ಆದರೆ ವೈಜ್ಞಾನಿಕವಾಗಿಯೂ ಇದೇ ವಿಚಾರ ಹೊರಹೊಮ್ಮಿರುವುದು ಮಾನವ ರಲ್ಲಿ ಯಾವುದೋ ಅಂತಃಪ್ರಜ್ಞೆ ಕೆಲಸ ಮಾಡುತ್ತಿರುವುದನ್ನು ಸೂಚಿಸುತ್ತದೆ.

## ನಾಡಸಂಸ್ಕೃತಿ ಪ್ರಭಾವ

ಗಿರಿಜನ ಜಾನಪದವು ತಿಳಿಸಿಕೊಡುವ ನಾಡಜನರ ಹೆಸರು ಪರಿಚಯಗಳು ಬಹುಶಃ ಸಂದರ್ಭವಶಾತ್ ಎನ್ನಬಹುದಾದರೂ ಅನೇಕ ವೇಳೆ ನಾಡವರೊಡನೆ ತಮ್ಮನ್ನು ಗುರ್ತಿಸಿಕೊಳ್ಳುವ, ಸಂಬಂಧ ಕಲ್ಪಿಸಿ ಕೊಳ್ಳುವ ಹಂಬಲವಿದ್ದಂತೆ ಕಂಡುಬರುತ್ತದೆ. ಆದ್ದರಿಂದಲೇ ದೊಡ್ಡ ಸಂಪಿಗೆಯನ್ನು ಪರಶುರಾಮ ಕ್ಷೇತ್ರವೆಂದು ಗುರುತಿಸಿ ಆ ಋಷಿಯು ತಪಸ್ಸು ಮಾಡಿದ ಕಥೆಯನ್ನು ಹೇಳುತ್ತಾರೆ. ಅಲ್ಲಿನ ಹೊಳೆಯನ್ನು ಭಾರ್ಗವಿ ಎಂದು ಕರೆಯುತ್ತಾರೆ.

ಹಾಗೆಯೇ ಸವಣನ ಸಂಹಾರದಲ್ಲಿ ಮಾದೇಶ್ವರ, ಬಿಳಿಗಿರಿರಂಗ, ಇತರ ದೇವತೆಗಳು ಕಾಣಿಸಿಕೊಳ್ಳುವುದಲ್ಲದೆ. ಭಸ್ಮಾಸುರ ಸಮುದ್ರ ಮಥನ

ಕಥೆಗಳ ಹೋಲಿಕೆಯಂತೆ ಇಲ್ಲಿ ಬಿಳಿಗಿರಿರಂಗ ಸ್ವಾಮಿ ಹೆಣ್ಣು ವೇಷ ಹಾಕಿಕೊಂಡು ದುಷ್ಟನನ್ನು ಮರಳು ಮಾಡಿ ಜಾರಿ ಬೀಳುವಂತೆ ಮಾಡುತ್ತಾನೆ. ಆದರೆ ಅವನನ್ನು ಜಾರಿ ಬೀಳಿಸುವ ತಂತ್ರ ವಿನೂತನ. ಅರಗನ್ನು ಪಾದರಕ್ಷೆಗೆ ಹಚ್ಚಿ ಕಾದಕಲ್ಲಿನ ಮೇಲೆ ಕಾಲಿಟ್ಟರೆ ಜಾರಿ ಬೀಳುವ ವಿಧಾನ. ಹೀಗೆ ಇತರ ಕಥೆಗಳ ಸಂಬಂಧ ನಮಗೆ ಕಂಡುಬರುತ್ತದೆ.

## ಕಾವ್ಯಮಯ ವರ್ಣನೆ

ಬುಡಕಟ್ಟು ಜನರು ತಮ್ಮ ವಿಚಾರ ಹೇಳಿಕೊಳ್ಳುವವರಲ್ಲ. ಚಂದ ಹಾಡುತ್ತೀರಿ, ಹಾಡಿ ಎಂದರೆ ಬಹುಶಃ ಪ್ರಯತ್ನಿಸಿಯಾರು. ಆದರೆ ಅದರ ನಿಜವಾದ ಸೌಂದರ್ಯ ಒಡಮೂಡಿ ಬರುವುದೆಂದರೆ ಅವರ ಹಬ್ಬಗಳಲ್ಲಿ. ಅಂತಹ ಸನ್ನಿವೇಶದಲ್ಲಿ ಅವರು ಅದರ ಲಹರಿಗೆ ಸಿಕ್ಕಿ ಬೆಳಗಿನ ನೇಸರು ಮೂಡುವವರೆಗೂ ಹಾಡು, ಕುಣಿತ ಮಾಡುತ್ತಾರೆ. ಜಾನಪದದಲ್ಲಿ ಆನಂದದ ಕಾವ್ಯವಿರುವಂತೆ, ಸರಳ ಆಡುನುಡಿಗಳನ್ನು ಮುತ್ತಿನಂತೆ ಪೋಣಿಸಿದಂತೆ ಭಾಷೆಯಿದ್ದಂತೆ ಮಿಗಿಲಾಗಿ ಸಹಸ್ರಾರು ವರ್ಷಗಳ ಆಚರಣೆಗಳು ಘಟನಾವಳಿ ಅವರದೇ ಕಲೆ ಸಾಹಿತ್ಯಗಳು ಗಿರಿಝರಿಯಾಗಿ ಹರಿದು ತಿಳಿಯಾಗಿ ನಿಂತ ಜ್ಞಾನದ ಸರಸ್ಸಿನಂತೆ ನಮಗೆ ತೋರುತ್ತದೆ. ಈ ಜ್ಞಾನ ಮಡುವಿನಿಂದ ಒಂದು ಬೊಗಸೆ ಮುಗುಚಿಕೊಂಡರೂ ಸಾಕು. ಚೇತೋಹಾರಿ ಅನುಭವ ನಮಗಾಗುತ್ತದೆ.

> "ಹೂವಿನ ಕೊಂಬು ಮುರಿಯಾಗಿಲ್ಲೆ
> ಮೊಗ್ಗಿನ ಕೊಂಬು ಬಾಡಾಗಿಲ್ಲೆ
> ಮೊಗ್ಗು ಮೊಗುರೆಲ್ಲಾ ನಿನ್ನದಯ್ಯೋ
> ಕಣ್ಣೆಟ್ಟು ನೋಡುನು ದೇವಾರೆ॥
>
> ಹಾಗೆವೇ ನೆನೆದು ನೋಡಿದಲೆ
> ಜೀವನ ಬೆಂಡು ಆದದೆಲೋ



> ಕಾರೆಲೆ ಹಾಗೆ ಕರಗಿದದೆ
> ಬೆಂಡೆಲೆ ಹಾಗೆ ಬೆಂದದೆಲ॥
> ಗೋರು ಗೋರೂಕೂ ಗೋರೂಕಾನಾ
>
> ಇನ್ನಿಂತ ವರ್ಷ ಬಾರನಯ್ಯೋ
> ಕಾಪಿಟ್ಟು ಮಡುಗುನು ದೇವರಯ್ಯ
> ಗೋರು ಗೋರೂಕೂ ಗೋರೂಕಾನಾ॥

"ಹೂವಿನ ಕೊಂಬೆಂದರೆ ಚಿಕ್ಕ ಮಕ್ಕಳು. ಅವರನ್ನು ನಾಶಗೊಳಿಸ ತಕ್ಕದಲ್ಲ. ಕಿಶೋರರನ್ನೂ (ಮೊಗ್ಗಿನ ಕೊಂಬೆ) ಬಾಡಿಸತಕ್ಕದಲ್ಲ. ಚಿಕ್ಕವರು ದೊಡ್ಡ ಮಕ್ಕಳು ಎಲ್ಲರೂ ನಿನ್ನವರೇ! ನಮ್ಮನ್ನು ಕಣ್ಣೆಟ್ಟು (ದಯೆಯಿಂದ) ನೋಡು, ಕಾಪಾಡು.

"ಹಾಗೆಯೇ ಯೋಚಿಸುತ್ತಿದ್ದರೆ ನಮ್ಮ ಜೀವನವೇ ಕಾರೆಲೆ ಹಾಗೆ ಕರಗಿತು. ಬೆಂಡೆಲೆ ಹಾಗೆ ಬೆಂದಿತು (ಕಾರೆ ಬೆಂಡೆ ಕಾಡಿನ ಮರಗಳು) ಇನ್ನಿಂತ (ವಿಪತ್ತಿನ) ವರ್ಷ ಬರದಿರಲಿ. ನಮ್ಮನ್ನು ಕಾಪಾಡಿ ಚೆನ್ನಾಗಿರಿಸು!"

(ಇದು ಯಾವುದೋ 'ಗೋರ'ವೋ (ಅಂದರೆ ಸಿಡುಬು ಅಥವಾ ಸಾಂಕ್ರಾಮಿಕದಿಂದ ಉಂಟಾದ ಕ್ಷೋಭೆ) ಅಥವಾ ಎಟ್ಟೆಯೋ (ಕ್ಷಾಮ) ಆದನಂತರ ಮೂಡಿದ ಪ್ರಾರ್ಥನೆಯಂತೆ ಕಾಣುತ್ತದೆ. ಇನ್ನೊಂದು ಅರ್ಥದಲ್ಲಿ "ಹೇ ದೇವರೇ ನೀನು ಪ್ರತಿವರ್ಷವೂ ನಮ್ಮ ಹತ್ತಿರ ಬಾ ಕಾತು ಕಾಪಾಡು" ಎಂದೂ ಹೇಳುತ್ತಾರೆ).

## ಯುವಕ ಯುವತಿಯರ ಸೆಡ್ಡು

ಜಾನಪದ ಕುಣಿತಗಳಲ್ಲಿ ಸೋಲಿಗರಲ್ಲಿ ಕಂಡುಬರುವುದೆಂದರೆ ಸಾಮಾನ್ಯವಾಗಿ ಮಹಿಳೆಯರು ಹಾಡುತ್ತಾರೆ. ಪುರುಷರು ಕುಣಿತ ಮಾಡುತ್ತಾರೆ. ಯಾವಾಗಲಾದರೊಮ್ಮೆ ಯುವತಿಯರು ಯುವಕರೊಡನೆ ಕುಣಿತದಲ್ಲಿ ಸೇರಿಕೊಳ್ಳುವುದುಂಟು.

"ಹಬ್ಬದಲಿ ನೀ ಬಂಡಗಿ ಕುಣಿದೆಲೋ
ನಿನ್ನ ಗೇನವೇ ಮನಸಿನಲಿ
ಹಾಗಾವೇ ನೆನೆದು ನೋಡಿದಲೆ
ನಿನ್ನಗೇನವೇ ಬಂದದಲೋ
ಹೂವಸಾಕಿನಿ ಮಡುಗನಯ್ಯ
ಕತ್ತಿಕ ಕತ್ತಿ ಬಂದಲೊವೆ
ಅದುವೊಂದು ಕೈ ನೋಡುತಿನಿ
ನಿನ್ನ ಜೊತೆಯಲಿ ಬರ್ತಿನಿಲೋ"

(ಒಬ್ಬ ಯುವಕನು ಯುವತಿಗೆ ಹೇಳುವ ಮಾತು: "ಹಬ್ಬದಲ್ಲಿ ನೀನೆಷ್ಟು ಚೆನ್ನಾಗಿ ಕುಣಿದೆ! ನಿನ್ನ ಜ್ಞಾನವೇ ಮನಸ್ಸಿನಲ್ಲಿ ತುಂಬಿದೆ. ನಾನು ನಿನ್ನನ್ನು ಬಿಡುವುದಿಲ್ಲ. ನಿನ್ನ ಜೊತೆ ನಾನು ಬರುತ್ತೇನೆ.")

ಯಾವಾಗಲಾದರೂ ಒಮ್ಮೆ ಹುಡುಗರು ಹುಡುಗಿಯರು ತಮ್ಮ ನಡುವೆ ಅಥವಾ ಅವರವರ ನಡುವೆಯೇ ಎರಡು ಗುಂಪಾಗಿ ಆಶುಕವಿತ್ವದ ಪಂದ್ಯ ಹೂಡಿ ಒಬ್ಬರನ್ನೊಬ್ಬರು ಛೇಡಿಸುವರು. ಗೋರು ಗೋರೂಕಾನಾ ಪಲ್ಲವಿ ಹೇಳುವಷ್ಟರಲ್ಲಿಯೇ ಮುಂದಿನ ಜಾಣ್ಮೆಯ ಆಶುಕವಿತ್ವದ ಸಾಲು ಸಿದ್ಧವಾಗುವುದು. ಈ ಸೆಡ್ಡಿನಲ್ಲಿ ನವಿರಾದ ಹಾಸ್ಯ ವಿನೋದ ಮತ್ತು ಜಾಣ್ಮೆಯು ಎದ್ದುಕಾಣುತ್ತದೆ.

ಹಬ್ಬದ ದಿನಗಳಲ್ಲಿ ಯುವಕ ಯುವತಿಯರು ಒಬ್ಬರೊಡನೆ ಒಬ್ಬರು ಮಾತನಾಡಬಹುದು. ಮಿಕ್ಕ ದಿನಗಳೂ ಮಾತಾಡುವರಾಗಲಿ ಆ ದಿನ ಒಂದು ರೀತಿ ನಿರ್ಬಂಧಗಳಿಲ್ಲ. ಆ ಸಮಯದಲ್ಲಿಯೇ ಅನೇಕ ಬಾರಿ ಅವರು ತಮ್ಮ ಮನಸ್ಸಿನಾಳವನ್ನು ಬಿಚ್ಚಿ ಹೇಳುವರು. ಒಪ್ಪಂದಗಳು ಮೂಡುವುವು.



## ಜೇನಿಗಾಗಿ ಪ್ರಾರ್ಥನೆ

ಸೋಲಿಗ ಜಾನಪದದಲ್ಲಿ ಜೇನಿಗೆ ಬಹಳ ಪ್ರಾಮುಖ್ಯತೆ ಇರುವಂತೆ ಕಂಡುಬರುತ್ತದೆ. ಸೋಲಿಗರ ಮಕ್ಕಳು ಕಾಡಿಗೆ ಹೋದಾಗ ಒಂದು ಜೇನು ಸವಿನೋಡದೆ ಬಾರರು. ರಂಗ ಬಂದಾಗಲೂ ಪುಸುಮಾಲೆ ಒಂದು ಜೇನು ದೊನ್ನೆಯೊಡನೆ ಕಾಯುತ್ತಿದ್ದಳಂತೆ. ಜೇನು ಹೇಗೆ ಸವಿಯೋ ಹಾಗೆಯೇ ಪ್ರೀತಿಯ ಸಂಕೇತ ಕೂಡ.

ಇಂತಹ ಜೇನು ಅಳೆಯಬೇಕಾದರೆ (ಅಳೆಯುವುದೆಂದರೆ ಮೃದುವಾಗಿ ಕೀಳುವುದು) ಮೊದಲು ಜೇನಿರುವ ಸ್ಥಳಕ್ಕೆ ಹೋಗಬೇಕು. ಅಲ್ಲಿ ಪೂಜೆ ನಡೆಯಬೇಕು. ನಂತರ ಜೇನಿಗಾಗಿ ಹಾಡಬೇಕು. ಇಲ್ಲಿ ಇದೊಂದು ಕೃತಜ್ಞತಾ ಭಾವದೊಡನೆ ಇರುತ್ತದೆ. ಪ್ರಕೃತಿಯಿಂದ ಒರಟಾಗಿ ನೇರ ದೋಚುವುದು ಸಲ್ಲ, ದೇವರಿಗೆ ಪ್ರಾರ್ಥನೆ ಸಲ್ಲಿಸಿ ಜೇನು ಕುಯ್ಯಬೇಕು.

"ಕಾರನ ಕರೆಯೋ ಕಾರಯ್ಯ
ಸೊಪ್ಪೀನೆರಕೆ ಕಾರನಾ
ಆರುಮೊಳದ ಅಣೆಗಡ್ಡಿ
ಮೂರು ಮೊಳದ ಮುಂಡು ಸೂಟೆ"

ಓ ಕಾರಯ್ಯ! ಕಾರನನ್ನು ಕರೆ; ಸೊಪ್ಪಿನ ಗುಡಿಸಲಿಗೆ ಅವನನ್ನು ಕರೆ ಅಣೆಗಡ್ಡಿ ಆರು ಮೊಳವಿರಲಿ! ಮುಂಡು ಸೂಟೆ ಮೂರು ಮೊಳವಿದೆ. (ಕಾರಯ್ಯನು ಸೋಲಿಗರ ಮೂಲ ಪುರುಷ; ಕಾರ ಎಂದರೆ ದೇವರು. ಅಣೆಗಡ್ಡಿಯು ಜೇನು ಚುಚ್ಚುವ ಕೋಲು; ಮುಂಡುಸೂಟೆಯು ಹೊಗೆ ಹಾಕಲು ಸೊಪ್ಪಿನ ಸೂಟೆ.)

ಜೇನು ಕುಯ್ಯಲು ಯುವಕರು ಎಲ್ಲ ಸಿದ್ಧತೆಗಳೊಡನೆ ಹೋಗುವರು. ಯಾವ ಯಾವ ಬರೆಯಲ್ಲಿ ಯಾವ ಯಾವ ಮರದಲ್ಲಿ ಜೇನಿದೆಯೆಂದು ಅವರು ತಿಳಿದಿರುವರು. ಅದೇ ಅವರ ಹಾಡುಗಳಲ್ಲಿ ಹರಿದು ಬರುವುದು.

ಮನೆಗೆ ಯಾರಾದರೂ ಬಂದರೆ ದೊನ್ನೆಯಲ್ಲಿಯೋ ಲೋಟದಲ್ಲಿಯೋ ಜೇನು ಕೊಟ್ಟು 'ಊಟ ಮಾಡಿ' ಎನ್ನುವರು. ಅದೆಂತಹ ಪ್ರೇಮ ಸತ್ಕಾರ! ಸರಳ ಸೊಬಗು ಅದರಲ್ಲಿ ಕಂಡುಬರುವುದು.

## ಮಾತನಾಡುವ ದೇವರು

ದೇವರನ್ನು ಕೇವಲ ಹೊಗಳುವ ಶಿಷ್ಟ ಸಂಸ್ಕೃತಿಗೆ ಪರ್ಯಾಯವಾಗಿ ದೇವರೊಡನೆ ನಿಕಟವಾಗಿ ಮಾತನಾಡುವ ಕೆಲವು ವೇಳೆ ತರಾಟೆಗೆ ತೆಗೆದುಕೊಳ್ಳುವ ಒಂದು ಒಡನಾಟ ಸಂಸ್ಕೃತಿ ಆದಿವಾಸಿಗಳದಾಗಿದೆ.

ದೈವಭಕ್ತಿಯು ನಾಡಿನಲ್ಲಿ ಹೆಚ್ಚು ಸಾಂಪ್ರದಾಯಿಕವಾಗಿಯೂ, ಪೂಜಾದಿ ಗಳಿಂದಲೂ ವ್ಯಕ್ತವಾದರೆ ಆದಿವಾಸಿ ಭಕ್ತನು ದೇವರೊಡನೆ ಮಾತುಕತೆ ಯನ್ನೇ ಮಾಡುತ್ತಾನೆ. ಪ್ರಕೃತಿಯ ಗಾಳಿ ನೀರು ಮುಂತಾದವುಗಳೊಡನೆಯೂ ಅವನ ಸಂಭಾಷಣೆ ಇದೆ. ಒಮ್ಮೆ ಒಂದು ಮದುವೆ ಸಂದರ್ಭದಲ್ಲಿ ಧೂಳಿನ ಸುಂಟರಗಾಳಿ ಎದ್ದಾಗ ಒಬ್ಬನು ಹೀಗೆ ಹೇಳಿದನು. "ಹೇ ಗಾಳಿ ನೀನು ನಮಗೆ ತೊಂದರೆ ಕೊಡಬೇಡ, ಹೊರಟು ಹೋಗು" ಎಂದು. ದೇವರು ಬಂದಾಗಲೂ ತಾನು ಇಂತಹ ದಿಕ್ಕಿನಿಂದ ಹೀಗೆ ಬಂದೆ ಎಂದು ಗುರುತಿಸಿ ಕೊಳ್ಳುತ್ತದೆ. ನಂತರ ಭಕ್ತರು ಮಾತುಕತೆಯನ್ನೇ ಮಾಡುತ್ತಾರೆ. "ನೀನು ನಮ್ಮನ್ನು ಕಾತು ಕಾಪಾಡಿ ಮಡುಗು" ಎಂದು ಕೇಳಿಕೊಳ್ಳುತ್ತಾರೆ. ಆದಿವಾಸಿ ಭಕ್ತನಿಗೆ ದೈವ ದೂರವಾಗಿ ಕಾಣಲಿಲ್ಲ. ಅದನ್ನು ತಮ್ಮ ನಿತ್ಯ ಜೀವನದಲ್ಲಿ ನಿಕಟವಾಗಿ ಈ ರೀತಿ ಕಂಡರು:

"ಚಂಡಿ ನೀನಲ್ಲ, ಚಾಮುಂಡಿ ನೀನಲ್ಲ"

"ಹೊತ್ತು ಮುಳುಗಿದರೇನು?
ಕತ್ತಲಾದರೆ ಏನು?
ಅಪ್ಪಾ! ನಿನ ಬಳಿಗೆ ಬರುವೆವು"



ಆದ್ದರಿಂದಲೇ ಮಾದೇಶ್ವರನು ಅವರ ಪಾಲಿಗೆ 'ಮುದ್ದುಮಾದಪ್ಪ' ನಾಗುತ್ತಾನೆ. ರಂಗಸ್ವಾಮಿಯು ರಂಗಭಾವನೇ ಆಗುತ್ತಾನೆ. ದೇವರೇ ಭಾವ ನಾದ ಮೇಲೆ ಇನ್ನು ಭಯವೇತರದು?

## ಬಣ್ಣನೆಯ ಸೊಬಗು

ಪ್ರಕೃತಿಯ ಪ್ರಾಣಿ ಪಕ್ಷಿ ಕ್ರಿಮಿ ಕೀಟಾದಿಗಳೇ ದೇವರನ್ನೂ ಅಲಂಕರಿಸು ತ್ತವೆ. ಸಿದ್ದಯ್ಯ ದೇವರು ಹಾವುಗಳಿಂದ ಅಲಂಕರಿಸಿಕೊಂಡು ಕಂಗೊಳಿ ಸುವ ರೀತಿ ಹೀಗಿದೆ;

ಸಿದ್ದಯ್ಯೋ
ನಾಗರದಾವ ನಡುಕಟ್ಟ ಮಾಡೀ
ಹೆಬ್ಬಾವ ಗದ್ದುಗೆಯ ಮಾಡೀ
ಬಿಲ್ಲುರಿಯಾವ ಉಂಗುರವ ಮಾಡೀ

ನಾಗರಹಾವು ನಡುಕಟ್ಟಾಯಿತಂತೆ ಸಿದ್ದಯ್ಯ ದೇವರಿಗೆ. ದೊಡ್ಡ ಗಾತ್ರದ ಹೆಬ್ಬಾವು ಗದ್ದುಗೆಯಲ್ಲದೆ ಇನ್ನೇನು? ಸಣ್ಣಗಿರುವ ಬಿಲ್ಲುರಿಹಾವು ಉಂಗುರ ವಾಯಿತು. ಹೀಗೆ ಮೆರೆಯುತ್ತಾರೆ ಸಿದ್ದಯ್ಯ ದೇವರು.

ಇನ್ನೊಂದು ಬಣ್ಣನೆ ಹೀಗಿದೆ;

"ಸಂದೇರೋಲಕ ಬಂದವರೆ
ಚಂದಿರ ಜೋತಿ ಬೆಳಕಲ್ಲಿ।।"

ಇನ್ನೊಂದೆಡೆ ಜಡೇಸ್ವಾಮಿ ಹೆಬ್ಬುಲಿಯನ್ನು ಕರೆಯುವ ಸೊಬಗು ಹೇಗಿದೆಯೆಂದರೆ.

"ಸನ್ನೇ ಮಾಡಿ ಕರೆದಾನ ಬಣ್ಣಾದ್ದೆಬ್ಬುಲಿಯಾ"

ಆಹಾ! ಎಷ್ಟು ಸುಂದರ ವರ್ಣನೆ ! ಅದೂ ಬಣ್ಣದ ಹೆಬ್ಬುಲಿಯನ್ನು ಗತ್ತಿನಿಂದ ಬರಿಯ ಸನ್ನೆಯಿಂದಲೇ ಕರೆಯುತ್ತಾನೆ.

ಇಂದು ಒಂದು ಸಸ್ಯ ಜಾನಪದ, ಪ್ರಾಣಿ ಜಾನಪದ ಮುಂತಾಗಿ ಗುರುತಿಸುವ ಕಾಲದಲ್ಲಿ ಸೋಲಿಗರ ಹೂಗಳ ಮೇಲಿನ ಹಾಡು, ಮರಗಳ ಬಗ್ಗೆಯೇ ಹಾಡು ಮುಂತಾದವು ಉದಾಹರಣೆಗಳಾಗಬಲ್ಲವು:

"ಸೇಬಿನ ಕೊಬೆ ಸೇಬಿ ನೂವ್ವೆ
ಹನುಕುಮಳೆಕ ಜೆಲ್ಲೆಂದೊಲ
ಗೋರು ಗೋರೂಕೂ ಗೋರೂಕಾನಾ||
ಬೆಟ್ಟ ಬೆಟ್ಟವೇ ಹೋಗೆನೆಲೋ
ಬೆಟ್ಟ ಸುಳಿಯ ಹೂವದೆಲೋ
ಗೋರು ಗೋರೂಕು ಗೋರೂಕಾನಾ||
ಬೆಂಜ ಗುಂಡಿಯ ಜಲಾದೂವೆ
ದೇವರ ಮಂಡೆಕ ನೀ ಬಂದೆಲೋ
ಗೋರು ಗೋರೂಕೂ ಗೋರೂಕಾನಾ||

(ಸೇಬಿನ ಕೋಬೆ (ಒಂದು ಸ್ಥಳ) ಯಲ್ಲಿ ಸೇಬಿನ ಹೂವು ಮಳೆಹನಿಗಳಿಗೆ ಜಿಲ್ಲೆಂದಿದೆ. ಬೆಟ್ಟ ಬೆಟ್ಟಗಳಲ್ಲಿ ಸುತ್ತುವಾಗ ಬೆಟ್ಟ ಸುಳಿಯ ಹೂವು ಕಂಗೊಳಿಸುತ್ತಿದೆ. ಬೆಂಜಗುಂಡಿ (ಒಂದು ಸ್ಥಳ)ಯ ಜಾಲದ ಹೂವೇ ದೇವರ ಶಿರವನ್ನು ನೀನು ಎಷ್ಟು ಚೆನ್ನಾಗಿ ಅಲಂಕರಿಸಿದೆ!)

ಆಹಾ! ಎಂತಹ ತಂಪನೆಯ ವರ್ಣನೆ ಇನ್ನೊಂದೆಡೆ ಮಣ್ಣ ಹಕ್ಕಿಯು (ಇದೊಂದು ಚಿಕ್ಕ ಹಕ್ಕಿ) ಗೂಡು ಕಟ್ಟುವುದನ್ನು ಹೀಗೆ ವರ್ಣಿಸುತ್ತಾರೆ:

ಮಣ್ಣ ತೆಗೆತೆಗೆ ಮಣ್ಣಕ್ಕಿ ಮಾವ
ಅರಳು ಕಾಡೆಲ್ಲಾ ಮಣ್ಣಕ್ಕಿ ಗೂಡು
ಬೆಂಡೆ ಕಾಡೆಲ್ಲಾ ಮಣ್ಣಕ್ಕಿ ಗೂಡು



"ಎಲೆ ಪುಟ್ಟ ಹಕ್ಕಿಯೇ, ನೀನು ಮರದಲ್ಲಿ ಮಣ್ಣನ್ನು ತೆಗೆದು ಗೂಡು ಕಟ್ಟು. ಅರಳು (ಒಂದು ಜಾತಿ ಮರ) ಕಾಡು ಬೆಂಡೆಕಾಡು (ಬೆಂಡೆ ಮರಗಳ ವನ) ಹೀಗೆ ಎಲ್ಲ ಮರಗಳಲ್ಲಿಯೂ ನಿನ್ನ ಗೂಡೇ ಗೂಡು!"

ಇನ್ನು "ಗೋರು ಗೋರೂಕಾನಾ" ಎಂಬ ಪಲ್ಲವಿ. ಇದೆಷ್ಟು ಮಧುರ! ದೂರದ ಕಾಡುಗಳಿಂದ ಇದು ಕೇಳಿಸುತ್ತಿದ್ದರೆ ಮೈ ಆನಂದದಿಂದ ಪುಳಕಿತ ವಾಗುತ್ತದೆ. ಸೋಲಿಗರ ಹಿರಿಯರು ಗೋರೂಕವನ್ನು ಜೇಡವೆಂದು ಹೇಳು ತ್ತಾರೆ. ಜೇಡ ಸುಂದರ ಎಲೆ ನೇಯ್ದಂತೆ ಪ್ರಕೃತಿಯಲ್ಲಿ ವಿನ್ಯಾಸಗಳು ನೇಯ್ದು ವರ್ಣಿತವಾಗಿದೆಯೋ ಎಂಬಂತೆ ಗೋರು ಗೋರುಕಾನಾ ಝೇಂಕರಿಸು ತ್ತದೆ.

## ಸೋಲಿಗ ದೇವರುಗಳು

ಸೋಲಿಗರ ದೇವರುಗಳು ಅನೇಕ. ಮಲೆಮಾದೇಶ್ವರ, ಬಿಳಿಗಿರಿರಂಗಪ್ಪ ಶಿಷ್ಟ ದೇವರುಗಳಂತೆ ತೋರಿ ನಾಡಕಡೆಯಿಂದ ಬಳುವಳಿಯಾಗಿ ಬಂದಿರು ವಂತೆ ಕಾಣುತ್ತದೆ. ಜಡೆಸ್ವಾಮಿ ದೇವರು ಬಹಳ ಜನಾದಾರಣೆ ಹೊಂದಿ, ಜನರ ಹೆಸರುಗಳು ಸಹ ಜಡೆಯಪ್ಪ ಜಡೆ ಮಾದಮ್ಮ ಜಡೆಸ್ವಾಮಿ ಮುಂತಾಗಿ ಇವೆ. ಜೇನಿನ ಬೇಟೆಯಲ್ಲಿ ಕಾರನನ್ನು ಕರೆಯಬೇಕು. ಹಾವುಗಳಿಂದ ಅಲಂಕೃತನಾದವನು ಸಿದ್ಧಯ್ಯ. ಇನ್ನೂ ಕುಂಬಪ್ಪ, ಕೇತಪ್ಪ, ಬಸಪ್ಪ, ಪಂದಪ್ಪ, ತೋಪಿನ ದೇವರು ಮುಂತಾಗಿ ಅನೇಕ ದೇವರುಗಳು ಇದ್ದಾರೆ. ಕೇತದೇವರು ಅರ್ಜುನ ಹೋರಾಡಿದ ಕಾಡಿನ ಕಿರಾತ (ಶಿವನೇ ಆ ರೂಪಿನಲ್ಲಿ ಬಂದು ಹೋರಾಡಿದ ಕಥೆಯಂತೆ) ಇರುವಂತೆ ಕಾಣುತ್ತದೆ. ಆತನೇ ಕೇತದೇವರಾಗಿರಬೇಕು. ದೇವಿಯರಲ್ಲಿ ಮಲಕಮ್ಮ (ಮಲಕ ಬೆಟ್ಟದ ದೇವಿ) ಬೇದಗೊಳ್ಳತಾಯಿ ಮುಂತಾದವರಿದ್ದರೆ ಪುಸುಮಾಲೆ ಸಹ ದೇವಿಯಾಗಿ ಪರಿಗಣಿತವಾಗುವಂತೆ ಕಾಣುತ್ತದೆ.

## ಹಬ್ಬಗಳು

ಸೋಲಿಗರ ಹಬ್ಬಗಳೆಂದರೆ ಅವರ ಅನೇಕ ದೇವರುಗಳು ಕಾಡಿನಲ್ಲಿದ್ದು ಅಲ್ಲಲ್ಲಾ ನಡೆಯುವ ಪೂಜೆ. ಈ ಸಂದರ್ಭದಲ್ಲಿ ಅನೇಕ ವೇಳೆ ಕೊಂಡ ಇರುತ್ತದೆ.

ಅವರು ಹಬ್ಬಗಳಲ್ಲಿ ಸಂಜೆ ನಂತರ ಮಾಡುವ ಕುಣಿತ ಹಾಡುಗಳಲ್ಲಿ ಹೀಗೆ ಹಾಡುವುದುಂಟು.

"ಅವರೆ ಮಾಡಿದ ತಾಮರ ದುಡ್ಡು
ರಾಗಿ ಮಾರಿದ ತಾಮರ ದುಡ್ಡು
ಜೋಳ ಮಾರಿದ ತಾಮರ ದುಡ್ಡು
ಬಿಚ್ಚ ಚೀಲದಿಂದ ಕಡೆದು ಬಾ ದುಡ್ಡೆ"

ಸೋಲಿಗರು ಅನೇಕ ಧಾನ್ಯಗಳನ್ನು ಬೆಳೆಯುತ್ತಿದ್ದರೆಂದು ಈ ಹಾಡು ವಿವರಿಸುತ್ತದೆ. ಬಹುಶಃ ಸೋಲಿಗರು ಮಾರಿದ ವಸ್ತುಗಳಿಗೆ ಅಂದಿನ ಕೊಳ್ಳುವವರು (ನಾಡವರು) 'ತಾಮರ ದುಡ್ಡು' ಕೊಟ್ಟು ಬೇಕಾದಷ್ಟು ಧಾನ್ಯ ಪಡೆದಿದ್ದಾರೆ. ಈ ತಾಮರ ದುಡ್ಡು ಜನರು ಬೇಕಾದಷ್ಟು ಧಾನ್ಯ ಬೆಳೆದೂ ಪೂರ್ಣ ಪ್ರತಿಫಲ ಪಡೆಯದ ವಿಚಾರ ಅರುಹುವಂತೆ ನಮಗನ್ನಿಸುತ್ತದೆ. ಮತ್ತೊಂದು ವಿಚಾರವೆಂದರೆ ಜನರ ಆರ್ಥಿಕ ಪರಿಸ್ಥಿತಿ ಕಠಿಣವಾಗಿದ್ದು ತಾಮರ ದುಡ್ಡುಗಳಲ್ಲಿಯೇ ಜೀವನ ನಿಭಾಯಿಸಬೇಕಾಗಿದ್ದ ದಿನಗಳನ್ನು ನೆನಪು ಮಾಡಿಕೊಡುವಂತೆ ತಿಳಿದುಕೊಳ್ಳಲೂಬಹುದು. ಇದು ಜನರ ಅತ್ಯಂತ ಸರಳ ಜೀವನವನ್ನು ನಿರೂಪಿಸುತ್ತದೆ.

## ಕಟ್ಟೆ ಮತ್ತು ಎಟ್ಟೆ

ಹಿರಿತಲೆಯ ಸೋಲಿಗರು ಕಟ್ಟೆ ಮತ್ತು ಎಟ್ಟೆ ಎಂಬ ಎರಡು ಸಂದರ್ಭಗಳನ್ನು ಯಾವಾಗಲಾದರೂ ಜ್ಞಾಪಿಸಿಕೊಳ್ಳುತ್ತಿರುತ್ತಾರೆ. ಬಿದಿರು ಹೂ



ಬಿಟ್ಟು ಅದರಿಂದ ಬಿದಿರಕ್ಕಿಯಾಗುವುದು 66 ವರ್ಷಗಳಿಗೆ ಒಮ್ಮೆ. ಇದು ಮುಂಬರುವ ಬರಗಾಲವನ್ನು ಸೂಚಿಸುತ್ತದೆ. ಅದಕ್ಕಾಗಿ ಮುಂದೆಯೇ ಬಿದಿರಿಕ್ಕಿಯನ್ನು ಸಂಗ್ರಹಿಸುತ್ತಾರೆ. ಇದಕ್ಕೆ ವಿಧಾನಗಳೆಂದರೆ ಚೀಲಗಳು ಬಟ್ಟೆಗಳು ಮುಂತಾದುವನ್ನು ಬಿದಿರಿನ ಕೆಳಗೆ ಹರಡಿ ಬಡಿಯುವುದು. ಈ ಅಕ್ಕಿಯನ್ನು ಕೊಡುವ ಬಿದಿರುಗಳೆಂದರೆ ಹೆಬ್ಬಿದಿರು, ಕಿರುಬಿದಿರು ಮತ್ತು ಕೂಗುಬಿದಿರು. ಈ ಸಂದರ್ಭದಲ್ಲಿ ಅಲ್ಪ ಪ್ರಮಾಣದಲ್ಲಿ ಜೇನು, ಗೆಡ್ಡೆ ಗೆಣಸು ದೊರೆಯುವುದು. ಇವೆಲ್ಲವನ್ನೂ ಸಾಧ್ಯವಾದಷ್ಟು ಸಂಗ್ರಹಿಸುತ್ತಿದ್ದರು. ಕಟ್ಟೆ ಅಕ್ಕಿಯನ್ನು ಕುಟ್ಟಿ ಅನ್ನ ಮುದ್ದೆ ಅಂಬಲಿಗಳಾಗಿ ಉಪಯೋಗಿಸುತ್ತಿದ್ದರು. ಹೀಗೆ ಮುಂಬರುವ ಬರಗಾಲಕ್ಕೆ (ಎಟ್ಟೆ) ಇದು ಸಹಾಯವಾಗುತಿತ್ತು. ಈ ಆಹಾರವೂ ಸಿಗದವರು ವಲಸೆ ಹೋಗುತ್ತಿದ್ದರು. ಹಂಚಿಕೊಂಡು ತಿನ್ನುವವರಾದವರಿಂದ ಆದಷ್ಟು ಇದನ್ನೂ ಹಂಚಿಕೊಳ್ಳುತ್ತಿದ್ದರು ಎಂದು ಹೇಳಬಹುದು. ಒಂದು ಸಾರಿ ಕಟ್ಟೆ ಅಕ್ಕಿಯನ್ನು ಕೊಟ್ಟ ಬಿದಿರು ನಾಶವಾಗಿ ಅಕ್ಕಪಕ್ಕದಲ್ಲಿ ಹೊಸ ಬಿದಿರು ಬೆಳೆಯಲು ಅವಕಾಶವಾಗುತ್ತಿತ್ತು. ಹೀಗೆ ಬಿದಿರಿನ ಆಯಸ್ಸು 66 ವರ್ಷ ಎಂದು ಊಹಿಸಬಹುದು.

ಕಟ್ಟೆ ಬಂದ 3-4 ವರ್ಷದಲ್ಲಿಯೇ ಎಟ್ಟೆ ಬರುತ್ತದೆ. ಆದರೆ ಇದರ ವರ್ತುಲ 66 ವರ್ಷವಲ್ಲ, 33 ವರ್ಷವೇ. ಅಂದರೆ ಒಂದು ಸಲ ಕಟ್ಟೆ ಬರುವಷ್ಟರಲ್ಲಿ ಎರಡು ಎಟ್ಟೆ ಬಂದಿರುತ್ತದೆ. ಎಟ್ಟೆ ಬಹು ಕಷ್ಟ ಕಾಲ, ಕಾಡು, ಊರುಗಳಲ್ಲಿ ಮಳೆಯಿಲ್ಲದೆ, ಗೆಡ್ಡೆ ಗೆಣಸು, ಜೇನು, ಹಣ್ಣು ಮುಂತಾದ ಯಾವ ಆಹಾರವೂ ದೊರೆಯದೆ, ನೀರೂ ಇಲ್ಲದೆ ನರಳುವಂತಹ ಪರಿಸ್ಥಿತಿ ಉಂಟಾಗುತ್ತಿತ್ತು. ಬಿಸಿಲಂತು ಅಸಾಧ್ಯ. ಈ ಸಂದರ್ಭದಲ್ಲಿ ಇಲಿ ಹೆಗ್ಗಣ ಮುಂತದವೂ ಹೆಚ್ಚಾಗುತ್ತಿದ್ದುವು. ಬಹಳ ಕಷ್ಟದಲ್ಲಿ ಅಲ್ಪ ಸ್ವಲ್ಪ ಸಂಗ್ರಹಿತ ಆಹಾರದಲ್ಲಿ ಕಾಲಹಾಕುತ್ತಿದ್ದರು.

ಈ ಕಟ್ಟೆ ಎಟ್ಟೆಯ ವಿಚಾರವೂ ಕೆಲವು ಕತೆಗಳಲ್ಲಿ ಬಂದಿರುತ್ತದೆ. ರಂಗಸ್ವಾಮಿ ಕತೆಯಲ್ಲಿಯೇ ಒಮ್ಮೆ ಈ ಕ್ಷಾಮ ಬಂದಿರುವಂತೆ ಕಾಣುತ್ತದೆ. ನಂತರ ಧೋ ಧೋ ಎಂದು ಮಳೆ ಬಿದ್ದು ಅಡವಿಯಲ್ಲಿ ಗೆಣಸು ಬೆಳೆದು ಅದನ್ನು ತರಲೆಂದೇ ಪುಸುಮಾಲೆ ಕಾಡಿಗೆ ಬಂದುದು.

ಹೀಗೆ ಸೋಲಿಗ ಜಾನಪದವು ಈ ಸರಳ ಆದಿವಾಸಿಗಳ ಜೀವನವನ್ನು ಅವರ ಮಧುರ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ. ಬಹುಶಃ ಎಲ್ಲ ಆದಿವಾಸಿಗಳ ಸಂಸ್ಕೃತಿಯೂ ಬಹುಮಟ್ಟಿಗೆ ಈ ರೀತಿಯೆ ಇದ್ದು ಜಗತ್ತು ಅವರಿಂದ ಕಲಿಯಬೇಕಾದದ್ದು ಸಾಕಷ್ಟು ಇದೆ. ಪ್ರದಾನ ಸಂಸ್ಕೃತಿ ತನ್ನ ದನಿಯನ್ನು ಸ್ವಲ್ಪ ಕುಗ್ಗಿಸಿ ಆಲಿಸಿದರೆ ಆಗ ಮಾತ್ರ ಈ ಅಮೂಲ್ಯ ದನಿಗಳು ಕೇಳಿಬರುತ್ತವೆ.

ಸೋಲಿಗ ಜಾನಪದದಲ್ಲಿ ಸುಂದರ ಕಾವ್ಯವಿದೆ; ಕಾವ್ಯದ ಕ್ಲಿಷ್ಟತೆಯಿಲ್ಲ. ಆಳವಾದ ಚಿಂತನವಿದೆ. ಆದರ ಕ್ಲೀಷೆಗಳಿಲ್ಲ. ಮುತ್ತಿನಂತಹ ಸರಳ ನುಡಿಯಿದೆ. ಆದರೆ ವಾಗಾಡಂಬರ ಭಾಷೆಯಿಲ್ಲ. ಅದು ಮಹತ್ತಿನಲ್ಲಿ ದೊಡ್ಡ ಸ್ಥಾನಗಳಿಸಿದರೂ ಎಲ್ಲ ಜನ ಸಾಮಾನ್ಯರಿಗೆ ಪ್ರಿಯವಾಗಿ ಹೃದಯಂಗಮವಾಗಿದೆ.

# ೩. ಸೋಲಿಗ ಪಾರಂಪರಿಕ ಜ್ಞಾನವಾಹಿನಿ

ಆದಿವಾಸಿ ಜನಾಂಗಗಳು ಯಾವಾಗಲೂ ಪ್ರಕೃತಿಯೊಡನೆ ನಿಕಟ ಸಂಪರ್ಕದಲ್ಲಿದ್ದು ಹಾಗೆಯೇ ಜೀವಿಸುವವರು. ಆದ್ದರಿಂದ ಅವರ ಪಾರಂಪರಿಕ ಜ್ಞಾನಕ್ಕೆ ಮೂಲ ಪ್ರಕೃತಿಯೇ. ಪ್ರಕೃತಿಯ ಗಿಡ ಮರ ಬೆಟ್ಟ ಗವಿಗಳಿಂದಲೂ ಭೂಮಿ, ಆಕಾಶ, ನೀರು, ಗಾಳಿ, ಬೆಂಕಿಗಳಿಂದಲೂ ನಿರಂತರ ಪಾಠವೇ ನಡೆಯಿತು ಈ ಪ್ರಕೃತಿಯ ಮಕ್ಕಳಿಗೆ. “ಕೇಳಿಸದ ದನಿಗಳು ಇನ್ನೂ ಹೆಚ್ಚು ಇಂಪು”, ಅಂತಹ ಮೌನ ಸಂದೇಶಗಳನ್ನು ಸಹಸ್ರಾರು ವರ್ಷ ಆಲಿಸಿದ ಜನರು ಈ ಆದಿವಾಸಿಗಳು. ಅದರ ಫಲವಾಗಿಯೋ ಏನೋ ಅವರು ಸಂವೇದನಾಶೀಲತೆಯನ್ನೂ ಮತ್ತು ವಿಶೇಷ ಅಂತಃಪ್ರಜ್ಞೆಯ ಆರನೆಯ ಇಂದ್ರಿಯವನ್ನೂ ಬೆಳೆಸಿಕೊಂಡಿರುವಂತೆ ಕಾಣುತ್ತದೆ.

ಹೀಗೆ ಪಾರಂಪರಿಕ ಜ್ಞಾನವು ಕಾಲದ ತೂಬಿನಿಂದ ಹರಿದು ಬರುವಾಗ ಬರಿಯ ಮೌಖಿಕ ಮತ್ತು ಆಚರಣೆಗಳ ಮೂಲಕ ಮಾತ್ರವಲ್ಲದೆ, ಅಂದಂದಿನ ಸಂಸ್ಕೃತಿ ವಿಚಾರಧಾರೆ ಜನಜೀವನಗಳ ಪರಿಣಾಮಗಳಿಂದಲೂ ಮಾತ್ರವೇ ಅಲ್ಲದೆ, ಇನ್ನೂ ಯಾವುದೋ ಆಂತರಿಕ ಸ್ಪಂದನಗಳಿಂದಲೂ ಪ್ರಭಾವಿತವಾಗಿ ಜನರ ಪಾಲಿಗೆ ಸುಲಲಿತವಾಗಿ ಹರಿದು ಬರುವುದು. ಇಂಥದೊಂದು ಆದಿವಾಸಿ ಸಮುದಾಯವೆಂದರೆ ಸೋಲಿಗರು.

## ಸೋಲಿಗ ಪಾರಂಪರಿಕ ಭೌತಿಕ ಜ್ಞಾನ

ಸೋಲಿಗರು ಅರೆ ಅಲೆಮಾರಿ ಜನಾಂಗದವರಾಗಿದ್ದರು. ಇತ್ತೀಚೆಗೆ ಅಂದರೆ ಸುಮಾರು 30-40 ವರ್ಷಗಳಿಂದ ಮಾತ್ರ ಇವರು ಬದಲಾದ ಕಾನೂನು ಕಟ್ಟಳೆ ರಾಜಕೀಯ ಸಾಮಾಜಿಕ ಪರಿಸ್ಥಿತಿಯಲ್ಲಿ ಒಂದೆಡೆ ನಿಲ್ಲುವ ಪರಿಸ್ಥಿತಿ ಇದೆ. ಆದರೂ ಬಿಡಿ ಕುಟುಂಬಗಳು ಒಂದೆಡೆಯಿಂದ ಒಂದೆಡೆಗೆ

ಇನ್ನೂ ಸಂಚರಿಸುವುದುಂಟು. ಹಿಂದೆ ಯಾವುದಾದರೊಂದು ಸ್ಥಳದಲ್ಲಿ ಸಾಕಷ್ಟು ಕಾಲ ನಿಂತಾಗ ವಲಸೆ ಹೋಗುವ ಆವಶ್ಯಕತೆಯನ್ನು ಆ ಪೋಡಿನ ಸಮುದಾಯ ಕಾಣುತ್ತಿತ್ತು. ಇದರಲ್ಲಿನ ಪಾರಂಪರಿಕ ಜ್ಞಾನವೆಂದರೆ ಅಲ್ಲಿಯ ಭೂಮಿಯ ಫಲವತ್ತತೆ ಕೆಲವು ವರ್ಷಗಳ ನಂತರ ನಶಿಸಿಹೋಗುವುದು. ವಲಸೆ ಹೋಗಲು ಮತ್ತೊಂದು ಕಾರಣ 'ಗೋರ'. ಗೋರವೆಂದರೆ ಸಿಡುಬು ಪಿಡುಗು. ಕಾಲರಾ ಪ್ಲೇಗು ಮುಂತಾದವೂ 'ಗೋರ'ವೇ. ಅಂತಹ ಗೋರ ಬಂದಾಗ ಬಟ್ಟೆಬರೆಗಳನ್ನು ಪಾತ್ರೆಪಡುಕುಗಳನ್ನೂ ಸಮಸ್ತ ಆಸ್ತಿಯನ್ನು ಅಲ್ಲಿಯೇ ಬಿಟ್ಟು ಜತೆಯ ನಾಯಿ ಬೆಕ್ಕುಗಳನ್ನು ಕಟ್ಟಿ ಹಾಕಿ (ಅವು ಜತೆಯಲ್ಲಿ ಬರದಂತೆ) ಉಟ್ಟ ಬಟ್ಟೆಯಲ್ಲಿ ವಲಸೆ ಹೊರಡುತ್ತಿದ್ದರು. ಅವರಿಗಿದ್ದ ಆಸ್ತಿ ಅಂತಹ ಭಂಡಾರವೇನೂ ಅಲ್ಲದಿದ್ದರೂ, ಕಷ್ಟವಾದರೂ ಎಲ್ಲವನ್ನು ಅಲ್ಲಿಯೇ ಬಿಟ್ಟುಹೋಗುತ್ತಿದ್ದ ಬುದ್ಧಿವಂತಿಕೆಯನ್ನು ಗಮನಿಸಿ. ಹಾಗೆಯೇ ಕಾಯಿಲೆ ಹೊತ್ತುತರಬಹುದಾದ ನಾಯಿಬೆಕ್ಕುಗಳನ್ನು ಅಲ್ಲಿಯೇ ಬಿಟ್ಟುಬರುತ್ತಿದ್ದುದನ್ನೂ ಗಮನಿಸಿ. ಅಷ್ಟೇ ಅಲ್ಲ, ಉಲ್ಬಣ ರೋಗಿಗಳನ್ನು ಅಲ್ಲಿಯೇ ವ್ಯವಸ್ಥೆ ಮಾಡಿ ಅವರಿಗಾಗಿ ದೊಡ್ಡ ದೊಡ್ಡ ಪಾತ್ರೆಗಳಲ್ಲಿ ರಾಗಿ ಗಂಜಿ ಕಾಸಿಟ್ಟು ಅವರನ್ನು ನೋಡಿಕೊಳ್ಳಲು ಧೈರ್ಯಶಾಲಿ ಹಿರಿಯರನ್ನು ಬಿಟ್ಟು ಸಮುದಾಯವು ಅಲ್ಲಿಂದ ಹೊರಡುತ್ತಿತ್ತು. ಇಲ್ಲಿ ಪಾರಂಪರಿಕ ಜ್ಞಾನದೊಡನೆ ಅವರ ಸಹೃದಯತೆಯನ್ನು ಗಮನಿಸಿ. ಬಹುಶಃ ತಮ್ಮ ಕರ್ತವ್ಯ ತೀರಿದ ನಂತರ ಹಿರಿಯರು ಬಂದು ಇವರನ್ನು ಸೇರುತ್ತಿದ್ದರು. ಆದಷ್ಟು ಸೋಂಕನ್ನು ಅಲ್ಲಿಯೇ ಬಿಟ್ಟು ತಮಗಿದ್ದ ಅಂದಿನ ಜ್ಞಾನದಲ್ಲಿಯೇ ಈ ಕ್ರಮಗಳನ್ನು ಅನುಸರಿಸುತಿದ್ದ ಸೋಲಿಗರ ಪಾರಂಪರಿಕ ಜ್ಞಾನ ಮೆಚ್ಚಬೇಕಾದ್ದೇ. ಈ ಜ್ಞಾನದ ಸಾಮಾಜಿಕ ಸ್ಪಂದನವೇ ಅವರು ಗುಳೆ ಹೊರಟಿದ್ದು; ಎಲ್ಲವನ್ನು ತ್ಯಜಿಸಿ ಹೊರಟಿದ್ದು, ಇನ್ನು ಆರೋಗ್ಯವನ್ನು ಎಲ್ಲಕ್ಕಿಂತಲೂ ಹೆಚ್ಚಾಗಿ ಕಂಡ ಇವರ ನಿಲುವನ್ನು ಊಹಿಸಿಕೊಳ್ಳಬಹುದು.



## ಪ್ರಶಸ್ತ ಸ್ಥಳ ಆಯ್ಕೆ

ಹೀಗೆ ವಲಸೆ ಹೊರಟ ಸೋಲಿಗರು ಕೆಲವು ದಿನ ಪ್ರಯಾಣ ಮಾಡಿ ಸ್ವಲ್ಪ ಎತ್ತರದ ಸ್ಥಳದಲ್ಲಿ ಮತ್ತು ನೀರಿನ ವಸತಿ ಅತಿ ಹತ್ತಿರವೂ ಅತಿ ದೂರವೂ ಇಲ್ಲದ ಪ್ರದೇಶವನ್ನು ಗಮನಿಸಿ ಅಲ್ಲಿ ಏಳು ಹರಳುಬೀಜಗಳನ್ನು ಕೆಲವು ಸಲ ಹರಳುಕಲ್ಲುಗಳನ್ನು ಸಾಲಾಗಿ ಜೋಡಿಸಿ ಅದರಮೇಲೆ ಒಂದು ಚಿಕ್ಕ ಬುಟ್ಟಿಯನ್ನು ಬೋರಲಿರಿಸಿ ಒಂದು ಇರ (ಇರುವೆ) ಸಹ ಬರದ ಹಾಗೆ ಇಟ್ಟು ರಾತ್ರಿ ಅಲ್ಲಿ ಮಲಗುತ್ತಿದ್ದರು. ಇದು ಅಳ್ಳು ಶಾಸ್ತ್ರ. ಬೆಳಗ್ಗೆ ಎದ್ದಾಗ ಬುಟ್ಟಿಯ ಕೆಳಗಿನ ಹರಳು ಚದುರಿರಬಾರದು. ರಾತ್ರಿ ಕನಸುಗಳೂ ಚೆನ್ನಾಗಿರಬೇಕು. ಇದರಲ್ಲಿಯ ಪಾರಂಪರಿಕ ಜ್ಞಾನವೆಂದರೆ ಎತ್ತರದ ಸ್ಥಳ ಮತ್ತು ನೀರಿನಿಂದ ಸ್ವಲ್ಪ ದೂರವೆಂಬುದು ಕಾಡುಪ್ರಾಣಿಗಳನ್ನು ದೂರ ವಿಡುವ ಪ್ರಯತ್ನ. ಇನ್ನೂ ಬುಟ್ಟಿ ಪ್ರಯೋಗ ನೆಲದ ಭದ್ರತೆಯನ್ನೋ ಹತ್ತಿರದ ಕೋಲಾಹಲವನ್ನೋ ಬಹುಶಃ ಸೂಚಿಸಬಹುದು! ಕನಸುಗಳು ಮಾನಸಿಕ ನೆಮ್ಮದಿಯನ್ನು ಸೂಚಿಸಬಹುದು. ಅಂತೂ ಪ್ರಶಸ್ತವೆಂದು ಕಂಡುಬಂದ ಸ್ಥಳಗಳಲ್ಲಿ ವಸತಿ ಕಲ್ಪಿಸಿಕೊಳ್ಳುತ್ತಿದ್ದರು.

## ಅದೆಂತಹ ಮನೆ?

ಇನ್ನು ಮನೆ ಕಟ್ಟುವುದು. ಅದೊಂದು ಸಣ್ಣದಾದ ಶುಚಿಯಾದ ಪುಟ್ಟ ಗುಡಿಸಲು. ಒಪ್ಪ ಓರಣವಾಗಿ ಜೋಡಿಸಿರುವ ನಾಲ್ಕಾರು ಪಾತ್ರೆಗಳು, ನೀರು. ಇದೇ ಅಡಿಗೆ ಮನೆ — ಒಂದು ಅಡ್ಡ ಗೋಡೆಯಿಂದಾದ ಸೃಷ್ಟಿ. ಒಂದು ಅಟ್ಟ. ಈ ಮನೆ ಕಟ್ಟಲು ಬೇಕಾಗುವುದೆಂದರೆ ಆರೇ ಕವ್ವೆಗಳು, ಸ್ವಲ್ಪ ಬಂಬು, ಹುಲ್ಲು ಅಷ್ಟೆ. ಮಣ್ಣಿನ ಗೋಡೆಗಳು. ಅದನ್ನು ಮಾಡುವ ವಿಧಾನವೆಂದರೆ ಬಿದಿರು ಕಡ್ಡಿಗಳ ಗೋಡೆ ಹಣೆದು ಅದಕ್ಕೆ ಎರಡೂ ಕಡೆಗಳಿಂದ ಸೇರುಮಣ್ಣನ್ನು ಮೆತ್ತುವುದು. ನಂತರ ಇದು ಭದ್ರವಾಗಿ ಹಿಡಿಯುವುದು. ನಂತರ ಒಂದು ಹುಲ್ಲಿನ ಛಾವಣಿ ಹಾಕಿದರಾಯಿತು. ಮನೆ ಸಿದ್ಧ! ಕಟ್ಟಲು ಹೆಚ್ಚೆಂದರೇ ಎರಡು ದಿನ.

ಇದು ಪಾರಂಪರಿಕ ಜ್ಞಾನ. ಸೋಲಿಗರಿಗಿದ್ದ ಅಲ್ಪ ಆವಶ್ಯಕತೆಗೆ ಸಾಮಾಜಿಕ ಸ್ಪಂದನಕ್ಕೆ ಆವಿಷ್ಕಾರವಾಗಿದ್ದೇ ಇಂತಹ ಪುಟ್ಟಮನೆ. ಆರ್ಥಿಕ ವಾಗಿ ಒಂದು ಪೈಸೆಯೂ ಖರ್ಚಿಲ್ಲ. ಮನೆಯವರೆಲ್ಲ ಸೇರಿ ಅಷ್ಟೇಕೆ ಪೋಡಿನ ಇತರ ಗೆಳೆಯರೂ ಸೇರಿ ಇದನ್ನು ಕಟ್ಟಿಯೇಬಿಡುತ್ತಾರೆ.

ಒಮ್ಮೆ ಒಂದು ಆದಿವಾಸಿಗಳ ಸಭೆಯಲ್ಲಿ ಈ ಲೇಖಕರು 'ಸೋಲಿಗರು ನಾಡ ಮನೆಗಳನ್ನು (ಅಂದರೆ ಇಟ್ಟಿಗೆ, ಹಂಚು ಇತ್ಯಾದಿ ಇರುವುದು) ಕಟ್ಟು ವಾಗಲೂ ಬರಿಯ ಮಣ್ಣು ಹೊತ್ತು ಕೇವಲ 10/- ರೂಪಾಯಿ ಗಳಿಸುತ್ತಾರೆ (ಅಂದು ಕೈಯಾಳಿಗಿದ್ದ ದಿನಗೂಲಿ). ತೂಕು ಗುಂಡು ಹಿಡಿಯುವ ಗಾರೆ ಯವರು 50/- ರೂಪಾಯಿ ಗಳಿಸುತ್ತಾರೆ (ಅಂದು ಗಾರೆಯವರಿಗಿದ್ದ ಕೂಲಿ). ನೀವೇಕೆ ತೂಕು ಗುಂಡು, ಕರಣಿ ಹಿಡಿಯಬಾರದು? ಎಂದು ಕೇಳಿದರು. ಆಗ ಸೋಲಿಗರು ಹೇಳಿದ್ದೇನೆಂದರೆ "ಸ್ವಾಮಿ ನಮಗೆ ನಾಡ ಮನೆ ಕಟ್ಟಲು ಬಾರದು; ನಮ್ಮ ತರದ ಮನೆಗಳನ್ನು ಒಂದೇ ದಿನದಲ್ಲಿ ಕಟ್ಟುತ್ತೇವೆ" ಎಂದರು. ಈ ಬರಹಗಾರರಿಗೆ ಕಣ್ಣು ತೆರೆಸಿದಂತಾಯ್ತು. ಹೌದು, ಅವರ ಪಾರಂಪರಿಕ ಜ್ಞಾನದಲ್ಲಿ ಅವರು ಶಕ್ತಿಯುತರು. ನಾವೇಕೆ ಬೇರೆ ಕ್ಷೇತ್ರದಲ್ಲಿ ಅವರನ್ನು ಅಳೆಯಬೇಕು? ಆದರೂ ಕಾಲಾನುಕ್ರಮದಲ್ಲಿ ಕೆಲವರು ಅದರಲ್ಲಿಯೂ ಆಸಕ್ತಿಯನ್ನು ಗಳಿಸಿಕೊಂಡರೆನ್ನಿ.

## ಆಹಾರ ತಾವೇ ಬೆಳೆಯಬೇಕು

ಸರಿ ಮನೆಯಾಯಿತು. ಇನ್ನು ಆಹಾರ ಬೇಡವೇ? ಒಂದು ವಿಧದಲ್ಲಿ ಇದರಲ್ಲಿ ಪಾರಂಪರಿಕ ಜ್ಞಾನ ಸಹೃದಯತೆ ಎತ್ತರಕ್ಕೆ ನಿಲ್ಲುವುದು.

ಪ್ರತಿಯೊಬ್ಬ ಸೋಲಿಗನಿಗೂ ಜೀವನದ ಮಹದಾಸೆಯೆಂದರೆ ಸ್ವಲ್ಪ ರಾಗಿ ಬೆಳೆಯಬೇಕು. ರಾಗಿಹಬ್ಬ ಮಾಡಬೇಕು. ಎಡೆ ಹಾಕಬೇಕು. ನೆಂಟರಿಷ್ಟರಿಗೆ ಸಾಧ್ಯವಾದಷ್ಟು ಕೊಡಬೇಕು. ಅವನು ಬೆಳೆದು ಪೂರೈಸುವ



ವೇಳೆಗೆ ಅರ್ಧಭಾಗದಷ್ಟು ಹಂದಿಪಾಲು ಮತ್ತೆ ಸ್ವಲ್ಪ ಆನೆ ಪಾಲು ಆಗಬಹುದು. ಪರವಾಗಿಲ್ಲ, ಏನೂ ದುಃಖವಿಲ್ಲ, ಇದಕ್ಕೆ ಹಗಲು ರಾತ್ರಿ ಗಂಡ ಹೆಂಡತಿ ಸರದಿ ಪ್ರಕಾರ ಕಾಯುವರು.

ನಮ್ಮಲ್ಲಿ ಬರುತ್ತಿದ್ದ ಹೊಸ ಹೊಸ ಅರಣ್ಯಾಧಿಕಾರಿಗಳು 'ಸೋಲಿಗರು ಭೂಮಿಗಾಗಿ ಅದೇಕೆ ಅಷ್ಟು ದಾಹ ಪಡುತ್ತಾರೆ' ಎಂದು ಗೊಣಗಿಕೊಳ್ಳು ತ್ತಿದ್ದುದುಂಟು. ಅದೇ ಅರಣ್ಯಾಧಿಕಾರಿಗಳು ಹಳಬರಾದಾಗ ಅವರಿಗೆ ಸೋಲಿಗರ ಹೃದಯ ಅರ್ಥವಾಗುತ್ತಿತ್ತು. ಅಂತಲೇ ಸೋಲಿಗರಿಗೆ ಸ್ವಲ್ಪ ಸ್ವಲ್ಪ ಜಮೀನು ಕೊಡುವ ಕಾರ್ಯವೂ ನೆರವೇರಿತು. ಭೂಮಿಯೊಡನೆ ಅಂತಹ ಆಳ ಸಂಬಂಧ ಈ ಮಣ್ಣಿನ ಮಕ್ಕಳಿಗೆ!

## ವ್ಯವಸಾಯ

ಇದು ಕಳಕೋಟ್ಲು ಬೇಸಾಯ. ನೇಗಿಲು ಉಪಯೋಗಿಸುತ್ತಿರಲಿಲ್ಲ. ಬೆಟ್ಟ ಪ್ರದೇಶದಲ್ಲಿ ಉಳುಮೆ ಮಾಡಿದರೆ ಭೂ ಕೊರೆತ ಉಂಟಾಗಿ ಭೂ ಸವೆತವಾಗುವುದು. ಅವರು ರಾಸಾಯನಿಕ ಗೊಬ್ಬರ ಹಾಕಲಿಲ್ಲ. ಎಲೆ ಗೊಬ್ಬರ, ಸಗಣಿಗೊಬ್ಬರ, ಅದೂ ಹಾಕಿದರೆ ಮಾತ್ರ. ಬಹಳ ಮುನ್ನ ಯಾವ ಗೊಬ್ಬರವನ್ನೂ ಹಾಕುತ್ತಲೇ ಇರಲಿಲ್ಲ. ಕಾಡಿನ ಎಲೆಗಳಿಂದ ಭೂಮಿ ತಾನೇ ಫಲವತ್ತಾಗಿತ್ತು. ಯಾವ ಯಾವ ಮಳೆ ಯಾವಾಗ ಬರುವುದೆಂದು ಸೋಲಿಗರು ಬಲ್ಲರು.

ಬಿತ್ತುವಾಗ ಬರಿಯ ರಾಗಿ ಬಿತ್ತುವುದಿಲ್ಲ, ಎಳ್ಳು, ಸಾಸಿವೆ ಅವರೆ ಮುಂತಾದುವನ್ನು ಬಿತ್ತುವರು. ಇದರಿಂದ ಒಂದೇ ಬಾರಿ ಅನೇಕ ಉಪಯುಕ್ತ ಧಾನ್ಯಗಳು ಸಿಗುವುವು. ಆದರೆ ಇದರ ಹಿಂದೆ ಇನ್ನೂ ಆಳವಾದ ಪಾರಂಪರಿಕ ಜ್ಞಾನವೊಂದಿದೆ. ಅದೆಂದರೆ ಅನೇಕ ಧಾನ್ಯ ಒಟ್ಟಿಗೆ ಬೆಳೆದಾಗ ಕೀಟ ಬಾಧೆಯ ಭಯವು ಕಡಿಮೆ. ಒಂದು ಪೈರಿಗೆ ಬರುವ ಕೀಟ ಮತ್ತೊಂದಕ್ಕೆ ಬರುವುದಿಲ್ಲ. ಅದಾದರೂ ಉಳಿದುಕೊಳ್ಳುತ್ತದೆ.

ಬಹು ಧಾನ್ಯ ಬೆಳೆಯಲ್ಲಿ ಬುಡಗಳು ಬೇರೆ ಬೇರೆ ಸ್ತರಗಳಲ್ಲಿದ್ದು ನೀರನ್ನು ವಿವಿಧ ಆಳಗಳಿಂದ ತೆಗೆದುಕೊಳ್ಳುತ್ತದೆ. ಅಂತೆಯೇ ಗಿಡದ ಮೇಲ್ಭಾಗ ಸೂರ್ಯ ರಶ್ಮಿಯನ್ನು ಹೆಚ್ಚಾಗಿ ಪಡೆಯುತ್ತದೆ. ಇದರ ಆರ್ಥಿಕತೆಯನ್ನು ನಾವು ಸುಲಭವಾಗಿ ಕಾಣಬಹುದು. ದಿನನಿತ್ಯದ ಜೀವನಕ್ಕೆ ಬೇಕಾದ ಎಲ್ಲ ವಸ್ತುಗಳೂ ದೊರೆತಂತಾಯಿತು. ಬಡವನಿಗೆ ನಾಲ್ಕು ಕಾಸೂ ಸಿಗಬಹುದು. ಹೀಗೆ ಪಾರಂಪರಿಕ ಜ್ಞಾನವು ಈ ಆದಿವಾಸಿ ಜನಾಂಗವನ್ನು ಕಾಲದಿಂದಲೂ ರಕ್ಷಿಸಿಕೊಂಡು ಬಂದಿರುವುದು.

## ಆಹಾರ ಸಂಗ್ರಹಣೆ

ಕಾಲದಿಂದಲೂ ಆಹಾರ ಸಂಗ್ರಹಣೆಯು ಆದಿವಾಸಿ ಜನಾಂಗಗಳ ಮುಖ್ಯ ಕಸುಬಾಗಿದೆ. ಅವರು ಗೆಣಸು, ಸೊಪ್ಪುಗಳು ಕಾಡಿನ ಹಣ್ಣು ಕಾಯಿ ಗಳನ್ನು ಉಪಯೋಗಿಸುತ್ತಾರೆ ಸುಮಾರು 40 ತಿನ್ನುವ ಸೊಪ್ಪುಗಳನ್ನು ಗುರುತಿಸಿದ್ದ ಸೋಲಿಗರು 10-15 ಸೊಪ್ಪುಗಳನ್ನು ತಾವೇ ಬೆಳೆಯುತ್ತಾರೆ. ನಮ್ಮ ವೈದ್ಯಕೀಯ ಅನುಭವದ ಪ್ರಕಾರ ಯಾವ ಪೋಡುಗಳು ಕಾಡಿನ ನಡುವೆ ಇತ್ತೋ ಅಲ್ಲಿ ಅಪೌಷ್ಟಿಕತೆ ಕಡಿಮೆಯಿತ್ತು. ಬಯಲು ಸೇರಿದ ಕಾಡಿನಿಂದ ದೂರವಾದ ಸೋಲಿಗ ಕುಟುಂಬಗಳಲ್ಲಿ ಅಪೌಷ್ಟಿಕತೆ ಹೆಚ್ಚಾಗಿ ಇದ್ದಿತು.

ಸೋಲಿಗರ ಮುಖ್ಯವಾದ ಆಹಾರ ರಾಗಿಯಾದರೂ, ಇನ್ನೊಂದು ಮುಖ್ಯವಾದದ್ದು ಗೆಣಸು. ಏಳು ತರದ ಗೆಣಸನ್ನು ಅವರು ಗುರುತಿಸಿದರು. ಅವೆಂದರೆ ನೂರೆ, ನೇವೆ, ಬೆಲ್ಲರೆ, ಹಕ್ಕಿ, ತೋಟಂಬು, ಬೆಲ್ಲದ ಗೆಣಸು ಮತ್ತು ಮರಬೆಲ್ಲದ ಗೆಣಸು. ಕೆಲವನ್ನು ಹಾಗೆಯೇ ತಿನ್ನಬಹುದು. ಕೆಲವನ್ನು ಬೇಯಿಸಬೇಕು. ಕೆಲವು ಸಿಹಿ. ಕೆಲವು ಸಪ್ಪೆ ಆದರೂ ಗೆಣಸು ಎಲ್ಲ ಕಾಲಕ್ಕೂ ಸಮೃದ್ಧಿ; ಅದಕ್ಕೆ ಜೇನು ಬಳಸಿ ಸೇವಿಸಲು ಬಹು ರುಚಿ.



ಇದು ಹಾಗಿರಲಿ. ನಾವಿಲ್ಲಿ ವಿಶೇಷವಾಗಿ ನೋಡಬೇಕಾಗಿರುವುದು ಗೆಣಸು ಕೀಳುವ ವಿಧಾನ. ಅದರಲ್ಲಿ ಅಡಗಿರುವ ಪಾರಂಪರಿಕ ಜ್ಞಾನ ಮತ್ತು ಕಳಕಳಿ. ಗೆಣಸನ್ನು ಕೀಳುವಾಗ ಒಂದೆರಡು ಹಂಬುಗಳನ್ನು ಅಲ್ಲಿಯೇ ಬಿಡುವರು. ಪೂರ್ತಿ ತೆಗೆಯುವುದಿಲ್ಲ. ಇದರಿಂದ ಮುಂದಿನ ಮಳೆಗೆ ಮತ್ತೆ ಗೆಣಸು ಚೆನ್ನಾಗಿ ಬೆಳೆದು ಬೇಕಾದಾಗ ಸಿಗುವುದು. ಇನ್ನೂ ಅನೇಕ ರೀತಿಯಲ್ಲಿ ಪ್ರಕೃತಿಯನ್ನು ತಮ್ಮೊಡನೆ ಭಾವಿಸಿ ಮಿತವಾಗಿ ಬಳಸುವರು. ಇದನ್ನು ಪ್ರಕೃತಿಯನ್ನು ದೋಚುವ ಆಧುನಿಕ ನಾಗರಿಕತೆಗಳಿಗೆ ಹೋಲಿಸಿ ನೋಡಿ.

## ಜೇನಿಗೆ ಪ್ರಾರ್ಥನೆ

ಇನ್ನು ಜೇನು ಅಳೆಯುವಾಗಲೂ (ಅಂದರೆ ಮೃದುವಾಗಿ ಕೀಳುವುದು) ಅಷ್ಟೆ. ಇಂಪಾಗಿ ಹಾಡನ್ನು ಹಾಡಿ ಪ್ರಾರ್ಥನೆ ಸಲ್ಲಿಸಿ ನಂತರ ಬಹು ಎತ್ತರಕ್ಕೆ ಹತ್ತುವರು. 'ಮಂಡುಸೂಟೆ' ಯನ್ನು ಉಪಯೋಗಿಸಿ ಹೊಗೆ ಹಾಕಿ ಜೇನು ಇಳಿಸುವರು.

"ಕಾರನ ಕರೆಯೋ ಕಾರಯ್ಯ
ಸೊಪ್ಪೀ ನೆರಕೆ ಕಾರನ
"ಓ ಕಾರಯ್ಯ! ಕಾರನನ್ನು ಕರೆ
ಸೊಪ್ಪಿನ ಗುಡಿಸಿಲಿಗೆ ಅವನನ್ನು ಕರೆ"

(ಕಾರ ಅಂದರೆ ದೇವರು. ಕಾರಯ್ಯ ಎಂದರೆ ಸೋಲಿಗರ ಮೂಲ ಪುರುಷ) ಮುಂತಾಗಿ ಹಾಡುವರು.

## ಪ್ರಾಣಿ ಪಕ್ಷಿಗಳೂ ಬಾಳಲಿ

ನೆಲ್ಲಿ ಕೀಳಬೇಕಾದರೆ ಎತ್ತರದ ಹಣ್ಣನ್ನು ಹಕ್ಕಿಗಳಿಗೆ ಬಿಡಬೇಕು. ಪೂರ್ವದ ಹಣ್ಣನ್ನು ಸೂರ್ಯನಿಗೆ. ಹೀಗೆ ಪ್ರಾಣಿ ಪಕ್ಷಿಗಳೂ ಹೊಟ್ಟೆ ಹೊರೆ ಯುವುದನ್ನು ಅಗತ್ಯವಾಗಿ ಗಮನಿಸುವರು. ಇನ್ನೊಂದು ಪಾರಂಪರಿಕ

ಜ್ಞಾನ ವೆಂದರೆ ಗೆಲ್ಲನ್ನು (ಅಂದರೆ ಮರದಕೊಂಬೆ) ಕಡಿಯರು. ಅಲ್ಲಿ ಪರಾವಲಂಬಿ ಸಸ್ಯ ಬೆಳೆಯುವುದು. ಉಪ್ಪಲು ಎಂದು ಇದನ್ನು ಕರೆಯುವರು. ಆದ್ದರಿಂದ ಗಿಡವನ್ನು ಹೇಗೆ ರಕ್ಷಿಸಬೇಕೆಂದು ಅಪರಿಮಿತ ಜ್ಞಾನ ಸೋಲಿಗರಲ್ಲಿ ಇರುವುದು.

## ಸೂರ್ಯನ ಬಗ್ಗೆ ಭಕ್ತಿ

ಬೆಳಗಾಗೆದ್ದು ಮುಖ ತೊಳೆದು ಸೂರ್ಯನಿಗೆ ನಮಸ್ಕಾರ ಮಾಡುವುದು ಸೋಲಿಗ ಪದ್ಧತಿ. 'ಸೂರ್ಯನೇ ಲೋಕವನ್ನು ನಡೆಸುವವನು. ಉರಿಯುತ್ತಾ ಸಂಚರಿಸುವವನು' ಎಂಬ ಅಚಲ ನಂಬಿಕೆ ಸೋಲಿಗರದು. ಇದು ಸತ್ಯವೆಂದು ಇಂದಿಗೆ ವಿಜ್ಞಾನದಿಂದ ಮನದಟ್ಟಾಗಿರುವುದು. ಅದು ಯಾವುದೋ ಆಂತರಿಕ ಜ್ಞಾನ ಸೂರ್ಯ ಜೀವನಾಧಾರವೆಂಬ ನಂಬಿಕೆಯನ್ನು ಈ ಸರಳ ಜೀವಿಗಳ ಮನದಲ್ಲಿಯೂ ಮೂಡಿಸಿರುವುದು. ಬರಿಯ ಭಕ್ತಿಯಲ್ಲದೆ ಸೋಲಿಗರ ಕಲ್ಪನೆಗಳಲ್ಲಿ ಸೌಂದರ್ಯವೂ ತುಂಬಿರುವುದು ಇದು ಆಕಾಶ ನಕ್ಷತ್ರಗಳ ವಿಷಯದಲ್ಲಿ ನಮಗೆ ಮನದಟ್ಟಾಗುವುದು. ಆಕಾಶಗಂಗೆಯನ್ನು 'ಸೀತೆ ನಡೆದ ದಾರಿ' ಎಂದೂ ಸಪ್ತರ್ಷಿ ಮಂಡಲವನ್ನು 'ಅಜ್ಜಿ ಮಂಚ' ಎಂದೂ ಮತ್ತು ಶುಕ್ರನನ್ನು 'ತಾರಕ್ಕಿ' ಅಥವಾ 'ಬೆಳ್ಳಿ' ಎಂದೂ ಮನೋಹರವಾಗಿ ಕರೆಯುವರು. ರಾತ್ರಿ ವೇಳೆ ಕಾಡಿನಲ್ಲಿ ದಾರಿ ಹಿಡಿಯಲು ಈ ಜ್ಞಾನವನ್ನು ಉಪಯೋಗಿಸಿಕೊಳ್ಳುತ್ತಿದ್ದರು.

## ಸಂಪನ್ಮೂಲಗಳ ಮಿತ ಬಳಕೆ

ಮರಗಳನ್ನು ಕಡಿಯಬಾರದೆಂಬ ಜ್ಞಾನವು ಸೋಲಿಗರಲ್ಲಿ ಮೊದಲಿನಿಂದಲೂ ಇದ್ದಿತು. ಈಗಿನ ಅರಣ್ಯನಾಶಕ್ಕೆ ಕಾರಣವೆಂದರೆ ನಗರದ ಒತ್ತಡಗಳು, ಸೌದೆ ಮತ್ತು ಮರಮುಟ್ಟುಗಳಿಗಾಗಿ. ಸೋಲಿಗನ ಮನೆಗೆ ಆರು ಕವ್ವೆ, ನಾಲ್ಕು ಒಣಮರಗಳು, ಸ್ವಲ್ಪ ಹುಲ್ಲು ಸಾಕಾದರೆ, ಹಳ್ಳಿ,



ಪಟ್ಟಣ ನಗರಗಳ ಮನೆಗೆ ಅದೆಂತಹ ಬಾಗಿಲುಗಳು! ತೊಲೆಗಳು, ಮರದ ಸಾಮಾನುಗಳು, ಮಹಡಿಮೆಟ್ಟಿಲನ್ನು ಸಹ ಮರದಲ್ಲಿಯೇ ಮಾಡಿಸಿಕೊಳ್ಳುವರು. ಎಲ್ಲರೂ ಸೇರಿ ಅರಣ್ಯ ನಾಶಕ್ಕೆ ಆದಿವಾಸಿಯನ್ನು ದೂರುವರು. ಅವನ ಮನೆಯಲ್ಲಿ ಮರದ ಕುರ್ಚಿ ಮೇಜಿದೆಯೇ? ಮೋಜಿನ ಅಲಮೇರಾಗಳಿವೆಯೇ? ಮಂಚಗಳಿವೆಯೇ? ಸ್ವಲ್ಪ ಒಣಸೌದೆಯಾದರೆ ಸಾಕು. ಅವನ ಜೀವನ ನಡೆಯುತ್ತದೆ.

ಇಂತಹ ಸೋಲಿಗರು ಮರವನ್ನು ಕಡಿಯಲೇ ಬೇಕಾಗಿ ಬಂದರೆ ಮರ ಕಡಿದ ನಂತರ ಅಪರಾಧಿ ಮನೋಭಾವದಲ್ಲಿ ಕ್ಷಮೆ ಕೇಳುವರು. ಕಡಿದ ಮರ ಬೀಳುವಾಗ ಆಗುವ ಸುಯ್ಯೆಂಬ ಶಬ್ದವು ಮರದ ಸೂಲು ಹೋಗುತ್ತಿರುವಾಗ ಆದದ್ದೆಂದು ತಿಳಿಯುವರು. ಮರಕ್ಕೆ ಅಡ್ಡಬಿದ್ದು ಕ್ಷಮೆ ಕೇಳಿದ ನಂತರ ಒಂದು ಕಲ್ಲನ್ನು ಅದರ ಬುಡದ ಕೊಂಟೆಯ ಮೇಲಿಡುವರು.

ಈ ರೀತಿಯ ಸಾಮಾಜಿಕ ಸ್ಪಂದನದಿಂದ ಮರಗಳು ಉಳಿದರೆ ಮಳೆ ಹೆಚ್ಚಾಗಿ ಇನ್ನೂ ಹೆಚ್ಚು ಕಾಡು ಬೆಳೆಯುವುದು. ಹೊಲಗದ್ದೆ ತೋಟಗಳಲ್ಲಿ ಬೆಳೆಯೂ ಹೆಚ್ಚಾಗುವುದು. ಎಲ್ಲರಿಗೂ ಇದರಿಂದ ಲಾಭವೇ. ಇದು ಹಾಗಿರಲಿ. ಕೆರೆ ನದಿ ಬಾವಿಗಳಿಗೆ ನೀರು ಚೆನ್ನಾಗಿ ಬಂದರೆ ಪಶುಪ್ರಾಣಿಗಳಿಗೂ ಒಳ್ಳೆಯದಲ್ಲವೇ?

ಸೋಲಿಗರು ಕಾಡಿಂದ ಕಾಡಿಗೆ ದಾಟುವಾಗ ಅಲ್ಲಿನ ವನದೇವತೆಗೆ ಮನಸ್ಸಿನಲ್ಲಿಯೇ ನಮಸ್ಕಾರ ಮಾಡುವರು. ಒಂದೊಂದು ಕಡೆಯೂ ದೇವರಿರುವುದು. ಪ್ರಕೃತಿ ಆರಾಧನೆ ಆದಿವಾಸಿಗಳಲ್ಲಿ ಒಂದು ಮುಖ್ಯ ಲಕ್ಷಣ.

## ವಿಶೇಷ ಹೆರಿಗೆ ಪದ್ಧತಿ

ಆರೋಗ್ಯದ ವಿಚಾರದಲ್ಲಿ ಸ್ಥಳೀಯ ಜ್ಞಾನ ಪರಂಪರೆಯ ಒಂದು ವಿಶೇಷ ವಿಚಾರವನ್ನು ಇಲ್ಲಿ ಹೇಳಲೇಬೇಕು. ಅದೇ ಸೋಲಿಗರ ವಿಶೇಷ

ಹೆರಿಗೆ ಪದ್ಧತಿ. ಡಾ|| ಸುದರ್ಶನ್‌ರವರು ಹೇಳುವಂತೆ ಸೋಲಿಗರ ಕುಳ್ಳಿರಿಸಿ ಹೆರಿಗೆ ಮಾಡುವ ಪದ್ಧತಿ ವೈಜ್ಞಾನಿಕ. ಬೇರೆಡೆ ಇರುವ ಮಲಗಿಸಿ ಹೆರಿಗೆ ಮಾಡುವ ಪದ್ಧತಿ ಅವೈಜ್ಞಾನಿಕ. ಏಕೆಂದರೆ ಕುಳ್ಳಿರಿಸಿ ಹೆರಿಗೆ ಮಾಡುವಾಗ ಗುರುತ್ವಾಕರ್ಷಣೆಯ ಸಹಾಯ ಇರುವುದು. ತಾಯಿಗೂ ಸುಲಭ. ಮಲಗಿಸಿ ಹೆರಿಗೆ ಮಾಡುವ ಸ್ಥಿತಿಗತಿಗಳು ಡಾಕ್ಟರರಿಗೆ ಸಹಾಯವೇ ಹೊರತು ತಾಯಿಗಲ್ಲ. ಇದು ಇತ್ತೀಚಿನ ವೈದ್ಯಕೀಯ ಪುಸ್ತಕಗಳಲ್ಲಿಯೂ ದಾಖಲಾಗಿದೆಯಂತೆ. ಅಂತೂ ಅದು ಹೇಗೋ, ಅನುಭವದಿಂದ ಸೋಲಿಗ ಆದಿವಾಸೀ ಜನಾಂಗ ಈ ವಿಚಾರವನ್ನು ಕಂಡು ಹಿಡಿದುಕೊಂಡು ತಮ್ಮದೇ ರೀತಿಯಲ್ಲಿ ಜೀವನಕ್ಕೆ ಅಳವಡಿಸಿಕೊಂಡಿರುವರು. ಅಷ್ಟೇ ಅಲ್ಲ. ಹೊಕ್ಕಳ ಬಳ್ಳಿ ಕತ್ತರಿಸಲು ಯಾವುದೇ ಚಾಕು ಉಪಯೋಗಿಸುತ್ತಿರಲಿಲ್ಲ. ಬಿದಿರನ್ನು ಹರಿತವಾಗಿ ಸೀಳಿ ಅದನ್ನೇ ಕತ್ತರಿಸಲು ಉಪಯೋಗಿಸುತ್ತಿದ್ದರು. ಆಗ ಸೋಂಕು ಉಂಟಾಗುವುದಿಲ್ಲ.

ಇನ್ನು ಮಗು ಹುಟ್ಟುವ ರೀತಿಯೋ! ಒಂದಾದರೂ 'ತಲೆ ಮೇಲಿನ ಮಗು' (Breach Birth) ಇಲ್ಲಿ ಹುಟ್ಟಿಲ್ಲ. ಏಕೆಂದರೆ ಅವರಿಗೆ ಮಗುವನ್ನು ತಿರುಗಿಸುವ (versions) ತಂತ್ರ ಗೊತ್ತಿದೆ. ಒಮ್ಮೆ 'ಕೈ ಹೊರಗೆ (Hand prolapse)' ಎಂಬ ಸಂದರ್ಭ ಒದಗಿದಾಗ ಶಸ್ತ್ರವಿಲ್ಲದೆ ಮಗು ಹುಟ್ಟುವಂತೆ ಉಪಾಯವಾಗಿ ಸೋಲಿಗ ಹೆರಿಗೆ ಪರಿಣಿತೆ ಸಿದ್ಧಮ್ಮ ಮಗುವಿನ ಕೈಯನ್ನು ಒಳಗೆ ತಳ್ಳಿ ಚೆನ್ನಾಗಿ ಹೆರಿಗೆ ಮಾಡಿದರು.

ಒಮ್ಮೆ ಗರ್ಭಿಣಿ ಸ್ತ್ರೀಯರ ಮತ್ತು ಶಿಶುಜನನದ ವಿಚಾರದಲ್ಲಿನ ಒಂದು ಕಮ್ಮಟದಲ್ಲಿ ಬಂದಿದ್ದ ಪರಿಣಿತರು (ನಾಡಿನ ವೈದ್ಯರು, ದಾದಿಯರು) ತಾಯಂದಿರಿಗೆ ಹೆಚ್ಚು ಆಹಾರ ಕೊಡಬೇಕೆಂದು ಪ್ರತಿಪಾದಿಸಿದಾಗ ಸೋಲಿಗ ಮಹಿಳೆಯರು ತಾಯಂದಿರಿಗೆ ತುಂಬಾ ಆಹಾರ ಕೊಡುವುದನ್ನು ವಿರೋಧಿಸಿದರು. ವಿಚಾರಿಸಿದಾಗ ಅವರು ತುಂಬಾ ಆಹಾರ ಕೊಟ್ಟರೆ



ಮಗುವಿನ ಗಾತ್ರ ದೊಡ್ಡದಾಗಿ ಹೆರಿಗೆ ಕಷ್ಟವಾಗುವುದೆಂದು ಹೇಳಿದರು. ಇದನ್ನು ನಮ್ಮ ಇಲ್ಲಿನ ಆಸ್ಪತ್ರೆಗಳಲ್ಲಿನ ವೈದ್ಯರು ಗಮನಿಸಿದ್ದಾರೆ. ಅತಿ ಹೆಚ್ಚಿನ ತೂಕದ ಮಕ್ಕಳು ಆದಿವಾಸಿಗಳಲ್ಲಿ ಹುಟ್ಟುವುದಿಲ್ಲ. ಸಾಕಷ್ಟು ಚರ್ಚೆಯ ನಂತರ ಪರಿಣಿತರು ಈ ವಿಚಾರವನ್ನು ಒಪ್ಪಿದರು. ನಾವು ಗಮನಿಸಬೇಕಾದ ಇನ್ನೊಂದು ಅಂಶವೆಂದರೆ ಹೆರಿಗೆಯ ಮತ್ತು ಮಗುವಿನ ಆರೋಗ್ಯದ ಜ್ಞಾನವೂ ಗಂಡಸರಿಗೂ ಇಲ್ಲಿ ಗೊತ್ತಿದೆ. ಈ ಕಮ್ಮಟದಲ್ಲಿಯೇ ಈ ಅಂಶವೂ ಬೆಳಕಿಗೆ ಬಂತು.

## ಋತುಗಳು, ಸಮಯ

ಆದಿವಾಸಿಗಳು ಕ್ಯಾಲೆಂಡರುಗಳನ್ನು ಉಪಯೋಗಿಸದಿದ್ದರೂ ಮರಗಳಲ್ಲಿನ ಚಿಗುರು, ಹೂವುಗಳು ಮತ್ತು ಹಕ್ಕಿಗಳ ಉಲಿಯಿಂದ ಸೂರ್ಯ ಚಂದ್ರರಿಂದ ದಿನದ ಸಮಯವನ್ನೂ ದಿನಗಳನ್ನೂ, ಋತುಗಳನ್ನು ತಿಳಿಯುತ್ತಿದ್ದರು. ಗೊಲ್ಲರ ಹಕ್ಕಿಯೆಂಬುದು ದಿನಕ್ಕೆ ಮೂರು ಬಾರಿ ಮಾತ್ರ ಶಿಳ್ಳಿ ಹಾಕುವುದು — ಬೆಳಿಗ್ಗೆ, ಮಧ್ಯಾಹ್ನ ಮತ್ತು ಸಂಜೆ. ಕೇಸಲಕ್ಕಿ ಬೇಸಗೆಯಲ್ಲಿ ಒಂದು ತಿಂಗಳ ಕಾಲ ಮಾತ್ರ ಹಾಡುವುದು. ಮೂರು ಗಂಟೆ ಹೂ ಎಂಬುದು ಮಧ್ಯಾಹ್ನ ಮೂರು ಗಂಟೆಗೆ ಸರಿಯಾಗಿ ಅರಳುವುದೆಂದು ಸಮಯ ತಿಳಿಯುವರು.

## ಪ್ರಾಣಿಗಳ ಜ್ಞಾನ

ಒಮ್ಮೆ ನಮ್ಮ ಆದಿವಾಸಿ ಶಾಲೆಯಲ್ಲಿ ಪ್ರಾಣಿಗಳನ್ನು ಅನುಕರಿಸುವ ಆಟವೊಂದನ್ನು ಆಡಿಸಲಾಯಿತು. ಮಕ್ಕಳು ವಿವಿಧ ಪ್ರಾಣಿಗಳ ರೀತಿ ಕೂಗುವುದು, ನಡೆಯುವುದು, ನೆಗೆಯುವುದು, ಮುಂತಾದುವನ್ನು ಮಾಡಿ ತೋರಿಸುತ್ತಿದ್ದರು. ಕೇತನೆಂಬ ಹುಡುಗ ಕರಡಿಯನ್ನು ಅನುಕರಿಸಿದ. ಓಡಾಡುತ್ತಾ ನೆಲಕ್ಕೆ ಕಿವಿ ಹಚ್ಚುತ್ತಿದ್ದ. ನಾನು ಪಕ್ಕದವರನ್ನು ಕೇಳಿದಾಗ ಅವರು ಹೇಳಿದ್ದು, ಕರಡಿ ಹಾಗೆಯೇ ನಡೆಯುವುದಂತೆ. ಶತ್ರುಗಳ ಬಗ್ಗೆ

ತಿಳಿಯಲೋ, ಇನ್ನೂ ಕೆಲವು ಮಾಹಿತಿ ತಿಳಿಯಲೋ ಅದು ಭೂಮಿಯ ಸ್ಪಂದನ ಗ್ರಹಿಸುವುದಂತೆ, ಈ ಜ್ಞಾನ ನಮ್ಮಗಳಿಗಾರಿಗೂ ಗೊತ್ತಿರಲಿಲ್ಲ. ಒಬ್ಬ ಸೋಲಿಗ ಹುಡುಗನಿಗೆ ಗೊತ್ತಿತ್ತು. ಅವರು ವಾಸನೆಯಿಂದಲೂ ಆನೆ ಮೊದಲಾದ ಪ್ರಾಣಿಗಳನ್ನು ಕಂಡುಹಿಡಿಯಬಲ್ಲರು. ಪಕ್ಷಿಗಳ ಚಲನ ದಿಂದಲೂ ಆನೆಗಳು ಯಾವ ದಿಕ್ಕಿನಿಂದ ಯಾವ ದಿಕ್ಕಿಗೆ ಎಷ್ಟುದೂರದಲ್ಲಿ ಹೋಗುತ್ತಿದೆಯೆಂಬುದನ್ನು ಕಂಡುಹಿಡಿಯಬಲ್ಲರು.

## ಸಸ್ಯಜ್ಞಾನ

ಪ್ರಾಣಿಗಳ ಆಟ ಏರ್ಪಡಿಸಿದಂತೆ ಒಮ್ಮೆ ಸಸ್ಯಗಳನ್ನು ಗುರುತಿಸುವ ಆಟ ಏರ್ಪಡಿಸಿದೆವು. ಒಬ್ಬ ಮಾದನೆಂಬ ಹನ್ನೆರಡು ವರ್ಷದ ಮುದ್ದು ಹುಡುಗನು 300 ರವರೆಗೆ ಸಸ್ಯಗಳ ಹೆಸರನ್ನು ಬರೆದನು. ಇನ್ನಿತರ ಹುಡುಗರೂ ಹಾಗೆಯೇ ಹತ್ತಿರ ಅಷ್ಟರವರೆಗೆ ಸಸ್ಯಗಳನ್ನು ಗುರುತಿಸಿದರೆನ್ನಿ. ಇದೊಂದು ಅಪೂರ್ವ ಜ್ಞಾನ. ಸಸ್ಯಗಳ ಮಧ್ಯೆಯೇ ಇದ್ದು ಕಾಡಿನಲ್ಲಿ ಓಡಾಡಿ ಸಸ್ಯಗಳೆಲ್ಲವೂ ಅವರ ಜೀವನ ಸಂಗಾತಿಗಳಾಗಿವೆ. ಇಲ್ಲಿ ನಾಡಿನಲ್ಲಿ ಕಾಂಕ್ರೀಟ್ ಕಾಡುಗಳ ನಡುವೆ ಮಕ್ಕಳು ಏನು ಕಲಿತಾರು? ಹಾಲು ಬಾಟಲ್‌ನಿಂದ ಬರುತ್ತದೆ ಎಂದುಕೊಂಡಾರು. ಹಕ್ಕಿ ಸಹ ದೂರ ದರ್ಶನ ಪೆಟ್ಟಿಗೆಯ (ಟಿವಿ) ಆಂಟೆನಾದಲ್ಲಿ ಗೂಡು ಕಟ್ಟುವುದು. ಇಲ್ಲಿ ಮರಗಳಿಗೆ ಉಳಿಗಾಲವಿದ್ದರೆ ತಾನೆ ಮರಗಳೂ ಉಳಿಯುವುದು?

ಮಣ್ಣಕ್ಕಿ ಎಂಬ ಚಿಕ್ಕ ಹಕ್ಕಿ ನಮ್ಮ ಕಾಡಿನಲ್ಲುಂಟು. ಅದನ್ನು ಹಳ್ಳಿಯ ಆಶುಕವಿ ಬಣ್ಣಿಸುವ ವಿಧಾನ ನೋಡಿ:

ಮಣ್ಣ ತೆಗೆತೆಗೆ ಮಣ್ಣಕ್ಕಿ ಮಾವಾ!
ಅರಳು ಕಾಡೆಲ್ಲಾ ಮಣ್ಣಕ್ಕಿ ಗೂಡು
ಬೆಂಡೆ ಕಾಡೆಲ್ಲಾ ಮಣ್ಣಕ್ಕಿ ಗೂಡು



ಮತ್ತು ಕಾಡೆಲ್ಲಾ ಮಣ್ಣಕ್ಕಿ ಗೂಡು
ಮಣ್ಣ ತೆಗೆ ತೆಗೆ ಮಣ್ಣಕ್ಕಿ ಮಾವಾ!

(ಎಲ್ಲೈ ಪುಟ್ಟ ಹಕ್ಕಿಯೇ! ನೀನು ಚಿಕ್ಕದೊಂದು ಗೂಡು ಕಟ್ಟು. ಅರಳು ಕಾಡೆಲ್ಲಾ ನಿನ್ನ ಗೂಡೇ! ಬೆಂಡೆ ಕಾಡೆಲ್ಲಾ ನಿನ್ನ ಗೂಡೇ! ಇತ್ಯಾದಿ)

ಹೀಗೆಯೇ ಇಷ್ಟ ಬಂದ ಮರಗಿಡಗಳ ಹೆಸರನ್ನೆಲ್ಲಾ ಹೇಳಿ ರಾತ್ರಿಯಿಡೀ ಕುಣಿಯುತ್ತಾರೆ. ಹಬ್ಬದಲ್ಲಿ. ಇನ್ನೂ ಗಿಡ ಮರಗಳ ಹೆಸರು ಬಾಯಿ ಪಾಠವೇ ಆಗುತ್ತದೆ. ಮಕ್ಕಳೂ ಹಾಡುತ್ತಾ ಹಾಡುತ್ತಾ ಕಲಿಯುತ್ತಾರೆ.

## ನಾರು ಬೇರು ಔಷಧಿ

ಆದಿವಾಸಿಗಳ ಪರಂಪರೆ ಜ್ಞಾನದ ಮಹತ್ತ್ವ ಹೊಳೆಯುವುದು ಅವರ ಔಷಧೋಪಚಾರದಲ್ಲಿ. ಅವರದು ನಾರು ಬೇರು ಔಷಧಿ. ನೂರಾರು ಸಸ್ಯ ಗಳ ಗುಣಗಳನ್ನು ಇತರ ಪರಿಣಾಮಗಳನ್ನೂ ಬಲ್ಲರು ಅವರು. ಎಲ್ಲಿ ಅದರ ಎಲೆ ಉಪಯೋಗಿಸಬೇಕು, ಯಾವಾಗ ಚಕ್ಕೆಯಿಂದ ತೇಯಬೇಕು, ಎಲ್ಲಿ ಬೇರು ಉಪಯೋಗಿಸಬೇಕು ಇತ್ಯಾದಿ ಎಲ್ಲವನ್ನು ಅನುಭವದಿಂದ ತಿಳಿದಿರು ವರು. ಅಷ್ಟೇ ಅಲ್ಲದೆ ಕೋಳಿ ಮೊಟ್ಟೆ ಲೋಳೆ ಮತ್ತು ಸೊಪ್ಪುಗಳನ್ನು ಸೇರಿಸಿ ಪ್ಲಾಸ್ಟರ್ ರೀತಿ ಮಾಡಿ ಮುರಿದ ಮೂಳೆಗಳಿಗೆ ಕಟ್ಟುತ್ತಿದ್ದರು. ಇಂದು ಇದು ಸಾಮಾನ್ಯ ಪದ್ಧತಿಯಲ್ಲಿ ಕಾಣಿಸದಿದ್ದರೂ ಸಸ್ಯದ ಔಷಧ ಪದ್ಧತಿ ಚೆನ್ನಾಗಿಯೇ ಮುಂದುವರಿದಿದೆ. ಸಂತಾನ ನಿಯಂತ್ರಣಕ್ಕೆ ಸಂಬಂಧಪಟ್ಟ ಕೆಲವು ಔಷಧಿಗಳು ಗಿರಿಜನರಿಗೆ ಗೊತ್ತಿರಬಹುದಾದರೂ ಆ ದಿಕ್ಕಿನಲ್ಲಿ ಇನ್ನೂ ಸಂಶೋಧನೆಯಾಗಬೇಕಾಗಿದೆ.

ನಾರು ಬೇರು ಔಷಧಿಯೊಡನೆ ವಿಭೂತಿ ಮಂತ್ರ ಚಿಕಿತ್ಸೆಯನ್ನು ಅದರೊಡನೆಯೇ ಮಾಡುವರು. ಇದು ಮನಸ್ಸಿಗೆ ಧೈರ್ಯ ತುಂಬಿ ರೋಗಿ ಹುಷಾರಾಗಲು, ಸಂಬಂಧಿಸಿದವರೂ ಶಾಂತವಾಗಿರಲು, ಖಂಡಿತವಾಗಿ ಸಹಾಯವಾಗುವುದು.

# ಸೋಲಿಗ ಪಾರಂಪರಿಕ ಮೌಲ್ಯಾಧಾರಿತ ನೆಲಗಟ್ಟುಗಳು

## ಪ್ರಕೃತಿಯ ಮಡಿಲಲ್ಲಿ ನಡೆಯುವ ಮದುವೆ

ಸೋಲಿಗ ಆದಿವಾಸಿ ಜನಾಂಗದಲ್ಲಿ ಬಲವಂತದ ಮದುವೆಗಳಿಲ್ಲ. ಹಾಗೇನಾದರೂ ಕಂಡುಬಂದರೆ ಅದು ನಾಡಸಂಸ್ಕೃತಿಯ ಪ್ರಭಾವದಿಂದ ಮಾತ್ರ. ಇತ್ತೀಚಿಗೆ ತಂದೆ ತಾಯಂದಿರು ಪ್ರಶ್ನೋತ್ತರ ನಡೆಸಿ ಏರ್ಪಡಿಸುವ ವ್ಯವಸ್ಥಿತ ಮದುವೆಗಳಾಗುತ್ತಿದ್ದರೂ, ಮುಖ್ಯವಾಗಿ ಗಂಡು ಹೆಣ್ಣಿನ ಒಪ್ಪಿಗೆಯಲ್ಲಿ, ಇನ್ನೂ ನಿಖರವಾಗಿ ಹೇಳಬಹುದಾದರೆ 'ಪ್ರೇಮ ಪರಾರಿ' ಯಲ್ಲಿ ಮದುವೆ ಏರ್ಪಡುತ್ತದೆ.

ಈ ವಿಭಾಗದಲ್ಲಿ (ಅಂದರೆ ಕರ್ನಾಟಕದ ಕಾಡುಗಳಲ್ಲಿ) ಐದು ಕುಲಗಳೂ ತಮಿಳುನಾಡಿನ ಕಡೆ ಏಳುಕುಲಗಳೂ ಇರುವ ಸೋಲಿಗರಲ್ಲಿ ತಮ್ಮ ಸ್ವಂತ ಕುಲದವರನ್ನು ಮದುವೆಯಾಗುವಂತಿಲ್ಲ. ಅದು ನಾಡಿನ ಕಡೆಯ ಗೋತ್ರದ ಲಕ್ಷಣವನ್ನು ಹೊಂದಿರುವಂತೆ ಕಂಡುಬರುತ್ತದೆ. ಅದೊಂದು ವಿಚಾರ ಹೊರತು ಎಲ್ಲ ಕುಲಗಳವರೂ ಪರಸ್ಪರ ಮದುವೆಯಾಗಲು ಇನ್ನಾವುದೇ ಕಟ್ಟುಪಾಡು ಅಡ್ಡ ಬರುವುದಿಲ್ಲ.

ವಯಸ್ಸಿಗೆ ಬಂದ ಗಂಡು ಹೆಣ್ಣು ಒಬ್ಬರನೊಬ್ಬರು ನೋಡುತ್ತಾರೆ. ಅವರಲ್ಲಿ ಪ್ರೇಮ ಅಂಕುರಿಸುತ್ತದೆ. ಅವರು ಸಮಯ ಸಾಧಿಸಿ ಕಾಡಿನಲ್ಲಿ ಅಲೆಯುತ್ತಾರೆ. ಹಣ್ಣು ಜೇನನ್ನು ಒಬ್ಬರಿಗೊಬ್ಬರು ಕೊಡುತ್ತಾರೆ. ಹೀಗೆ ಅವರು 'ಪಳಗುತ್ತಾರೆ.' ಒಂದು ದಿನ 'ನೀರಿಗಂತ ಅವಳು ಬಂದು ಕಾಡಿಗಂತ ಅವನು ಬಂದು' ಇಬ್ಬರೂ ಪರಾರಿಯಾಗುತ್ತಾರೆ. ಅವಳು ಅಂದೂ ತುಂಬಿಟ್ಟ ಕೊಡ ಅಲ್ಲಿಯೇ ಇರುತ್ತದೆ. ಹೀಗೆ ಅವರು ಓಡಿಹೋಗಿ ದೂರದ ಯಾವುದಾದರೂ ಪೋಡಿನಲ್ಲಿ ಆಶ್ರಯ ಪಡೆಯುತ್ತಾರೆ. ಅಲ್ಲಿಯ ಜನ ಅನ್ನಾಹಾರ ಕೊಟ್ಟು ನೋಡಿಕೊಳ್ಳುತ್ತಾರೆ.



ಇನ್ನು ಓಡಿಹೋದ ಈ ಜೋಡಿಯನ್ನು ಯಜಮಾನರು ಪತ್ತೆ ಹಚ್ಚುತ್ತಾರೆ. ಪೋಡಿಗೆ ಕರೆದುಕೊಂಡು ಬಂದು 'ನ್ಯಾಯ' ಮಾಡುತ್ತಾರೆ. ತಪ್ಪು ಕಾಣಿಕೆ 12½ ರೂಪಾಯಿ ಕಟ್ಟಿಸಿ ಅವರು ಸಂಸಾರ ನಡೆಸಲು ಅನುಮತಿ ನೀಡುತ್ತಾರೆ.

ಅಂತೂ ಪ್ರಕೃತಿ ಮಡಿಲಲ್ಲಿ ಈ ಮದುವೆ ನಡದೇ ಹೋಗುತ್ತದೆ. ಬಾಜಾ ಬಜಂತ್ರಿಗಳಿಲ್ಲದೆ, ನಿಸರ್ಗದ ಹಕ್ಕಿ ಹಾಡಿನ ನಡುವೆ, ಗಿಡಮರಗಳ ನೆರಳಿನಲ್ಲಿ, ಝುಳುಝುಳು ನೀರಿನ ತೊರೆಗಳ, ಎಲೆಗಳ ಮರ್ಮರ ಶಬ್ದಗಳಲ್ಲಿ ದೂರು ಆಕ್ಷೇಪಣೆಗಳಿಲ್ಲದೆ ನಡೆಯುವ ಈ ಪ್ರಕೃತಿ ಮದುವೆ ಎಷ್ಟು ಮನೋಹರ! 'ತಪ್ಪುಗಾಣಿಕೆ' ಕಡೆಗಣಿಸುವುದಾದರೆ ಒಂದು ಪೈಸೆ ಖರ್ಚಿಲ್ಲದೆ ಈ ಮದುವೆ ನಡೆಯುತ್ತದೆ.

ಇದರ ಪಾರಂಪರಿಕ ಜ್ಞಾನವನ್ನು ಚರ್ಚಿಸುವುದಾದರೆ, ಹೆಣ್ಣು ಗಂಡುಗಳಿಗೆ ತಮ್ಮ ಸಹವರ್ತಿಯನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯ. ಖರ್ಚಿಲ್ಲದೆ ಇರುವ ಸೋಲಿಗ ಪದ್ಧತಿಯನ್ನು ಮೆಚ್ಚಬೇಕಾದ್ದೆ. ಹೆಚ್ಚೆಂದರೆ ಪೋಡಿಗೆ ಊಟ ಕೊಡುವ ಪದ್ಧತಿ ಇದ್ದಿತಾದರೂ, ಇತ್ತೀಚಿಗೆ ನಾಡ ಅನುಕರಣೆಯಿಂದ ದುಂದು ಮದುವೆಗಳೂ ಅಲ್ಲಲ್ಲಿ ನಡೆಯುತ್ತಿವೆ.

## ಸರಳ ಜೀವನ ಮತ್ತು ಪ್ರಾಮಾಣಿಕತೆ

ಸರಳಜೀವನ ಮತ್ತು ಪ್ರಾಮಾಣಿಕತೆ ಒಂದಕ್ಕೊಂದು ಪೂರಕ. ಸೋಲಿಗರ ಜೀವನದಲ್ಲಿ ಆಹಾರ, ವಸತಿ, ಬಟ್ಟೆ, ಮನರಂಜನೆ, ಪೂಜೆ, ವೈದ್ಯ ಪದ್ಧತಿ, ಕಲಿಕೆ, ನ್ಯಾಯ, ಪರಸ್ಪರ ವ್ಯವಹಾರ ಎಲ್ಲವೂ ಸರಳವೇ!

ಕೇವಲ ರಾಗಿ, ಒಂದಷ್ಟು ಗೆಣಸು ಸೊಪ್ಪುಗಳಾದರೆ ಸೋಲಿಗರ ಊಟ ತೀರಿತು. ಉಪವಾಸವಿದ್ದರೂ ಇದ್ದನೇ. ರುಚಿಪಾಕಗಳು, ಆಹಾರ ನಿಯಮಾವಳಿಗಳು, ರಾಜಸಗಳು, ಅವರಲ್ಲಿ ಇಲ್ಲ, ಎಂದಾದರೂ ಪಾಲು

ಹಾಕಿಕೊಂಡು (ಹಂಚಿಕೊಳ್ಳುವುದು) ಮಾಂಸದ ಅಡುಗೆ ತಿನ್ನಬಹುದೇನೋ. ಇದು ಕೆಲವೇ ಸಂದರ್ಭದಲ್ಲಿ ಮಾತ್ರ.

ಇನ್ನು ಮನೆ, ಅದೊಂದು ಮುದ್ದಾದ ಪುಟ್ಟ ಗುಡಿಸಲು, ಮಣ್ಣುಗೋಡೆ, ಬಿದಿರು ಗಳಗಳು ಮತ್ತು ಮರದ ಕವ್ವೆಗಳಿಂದಾದ್ದು. ಅದರಲ್ಲಿಯೇ ಅಡುಗೇ ಮನೆ. ಅಟ್ಟ ಎಲ್ಲವೂ! ಉಡುಪೆಂದರೆ ಒಂದು ತುಂಡು ಪಂಚೆ (ಮುಂಡು) ಒಂದು ಕವಚ (ಶರಟು) ಅದರಾಯಿತು. ಅವರದೇ ಹಾಡು. ಕುಣಿತ ತಾಳ ಗಳಿಂದ ಮನರಂಜನೆ, ದೇವರೊಡನೆಯೇ ನೇರ ಮಾತನಾಡುವ ಪೂಜೆ, ಕಾಡು ಹೂಗಳು, ಪತ್ರೆಗಳು ಇದರಿಂದ ಪೂಜೆ ಇದನ್ನು ಕೇಳಿ.

"ಜಾಲಾದುವ್ವಿನ ರುಂಡ ಮಾಲೆ
ಸಾಮಿ ಕತ್ತಿನ ಜೋಲಿದಾದೆ"

(ಜಾಲದ ಹೂವಿನ ತಲೆಯ ಮಾಲೆಯು ದೇವರ ಕತ್ತಿನಲ್ಲಿ ಜೋಲಾಡುತ್ತಿದೆ).

ವೈದ್ಯ ಪದ್ಧತಿಯಲ್ಲಿ ನಾರು ಬೇರು ಔಷಧಿ. ಅದಕ್ಕೆ ಖರ್ಚಿಲ್ಲ. ಕಾಡಿನಲ್ಲಿಯೇ ಲಭ್ಯ. ಇನ್ನು ಮುಂಚಿನ ಕಾಲಕ್ಕಿದ್ದ ಕಲಿಕೆಯೆಂದರೆ ಮರ ಗಿಡಗಳ ಬಗ್ಗೆ. ಕಾಡಿನಲ್ಲಿ ಓಡಾಡುವ ಬಗ್ಗೆ. ಪ್ರಾಣಿಗಳ ಬಗ್ಗೆ ಅದನ್ನೆಲ್ಲ ಅವರು ಬಲ್ಲರು. ಕೋರ್ಟು ಕಛೇರಿಯಿಲ್ಲದ ನ್ಯಾಯ (ಇದನ್ನು ಬೇರೆಡೆ ಚರ್ಚಿಸಲಾಗಿದೆ) ಆದಿವಾಸಿಗಳದು. ವ್ಯವಹಾರಕ್ಕೆ ಪತ್ರಗಳಿಲ್ಲ. ಸೂರ್ಯ ಚಂದ್ರ ಸಾಕ್ಷಿ. ಆಡಿದ ಮಾತೇ ಮುತ್ತು. ಇದು ಇಂದಿಗೆ ಚೆಲ್ಲದಿರುವುದು ನಮ್ಮ ಸಮಾಜದ ದೋಷವೇ ಹೊರತು ಪಾರಂಪರಿಕ ಜ್ಞಾನದ ಕುಂದಲ್ಲ.

## ಸೋಲಿಗ ನ್ಯಾಯ

ಸೋಲಿಗರ ನಾಡಿನಲ್ಲಿ ತಮ್ಮದ್ರೇ ನ್ಯಾಯ ಪಂಚಾಯತಿ ಕಾಲದಿಂದಲೂ ನಡೆದು ಬಂದಿದೆ. ಕೋರ್ಟು ಕಛೇರಿ ಅಲೆದು ನಾಡವರು ದುಡ್ಡುತೆತ್ತು



ತತ್ತರಿಸುತ್ತಿರುವಾಗ ಈ ಸರಳ ಜನರು ತಮ್ಮದ್ರೇ ನ್ಯಾಯ ಹೊಂದಿದ್ದಾರೆ. ನ್ಯಾಯದಲ್ಲಿ ಸಾಮಾನ್ಯವಾಗಿ ಅತಿ ಹೆಚ್ಚಿನ ಕ್ರಿಮಿನಲ್ ಸಮಸ್ಯೆಗಳಿರುವುದೇ ಇಲ್ಲ.

ನ್ಯಾಯದಲ್ಲಿ ಎಲ್ಲ ಕುಲದ ಮುಖ್ಯಸ್ಥರೂ ಕುಳಿತುಕೊಳ್ಳುತ್ತಾರೆ. ಅವರಿಗೆ ಅದು ಎಷ್ಟು ಚೆನ್ನಾಗಿ ಕರ್ತವ್ಯಗಳನ್ನು ಹಂಚಲಾಗಿದೆ! ತೆನೆಯರ ಕುಲದ (ಪುಸುಮಾಲೆ ಈ ವಂಶದವಳು) 'ಪಟ್ಟೆಗಾರ', ಮುದ್ರೆಯುಂಗುರ ಹೊಂದಿ ನ್ಯಾಯ ತೀರ್ಮಾನ ಹೇಳುವ ಸಳಕರ ಕುಲದ 'ಯಜಮಾನ', ನ್ಯಾಯದಲ್ಲಿ ಪ್ರಶ್ನೆ ಕೇಳುವ ಸೂರರ ಕುಲದ 'ಚಲುವಾದಿ' ಶಿಸ್ತಿನ ಅಧಿಕಾರಿಯಾಗಿ ನ್ಯಾಯ ಸೇರಿಸುವ, ತಮಟೆಸಾರಣೆ ಮಾಡುವ ನ್ಯಾಯದ ಫಿರ್ಯಾದಿ ದಾರರು ಅಪರಾಧಿಗಳನ್ನು ಹಾಜರುಪಡಿಸುವ ಬೆಳ್ಳರ ಕುಲದ ಕೋಲು ಕಾರ, ಇವರಿಗೆ ಸಹಾಯ ಮಾಡುವ ಹಾಲರ ಕುಲದ ದಳವಾದಿ, ಇವರು ಕುಳಿತು ನ್ಯಾಯ ನಡೆಸುತ್ತಾರೆ. ಸೂಕ್ತ ಶಿಕ್ಷೆ ಪರಿಹಾರ ವಿಧಿಸುತ್ತಾರೆ. ಆ ಸಂದರ್ಭದಲ್ಲಿ ಹೃದಯವಂತಿಕೆಯನ್ನು ತೋರುತ್ತಾರೆ. ತಪ್ಪು ಸರಿಪಡಿಸಿ ಕೊಳ್ಳಲು ಮತ್ತೊಂದು ಅವಕಾಶ ಮುಂತಾಗಿ ನೀಡುತ್ತಾರೆ. ನ್ಯಾಯದಲ್ಲಿ ಜನರನ್ನು ಒಗ್ಗಟ್ಟು ಮಾಡಲು ನೋಡುತ್ತಾರೆಯೇ ಹೊರತು ಒಡೆಯುವು ದಿಲ್ಲ. ಒಂದು ಪೈಸೆ ಖರ್ಚಿಲ್ಲದೆ ಫಿರ್ಯಾದಿದಾರನಿಗೆ ನ್ಯಾಯ ಸಿಗುತ್ತದೆ. ಮಹಿಳೆಯರ ವಿಚಾರದಲ್ಲಿ ಸ್ವಲ್ಪ ಮೃದುತ್ವ ಇರುತ್ತದೆ. ನ್ಯಾಯದ ನಂತರ ಜನ ದ್ವೇಷ ಸಾಧಿಸುವುದಿಲ್ಲ. ಇದು 'ದೇವಸಭೆ'ಯೆಂದು ಅರಿತು ಶಾಂತ ವಾಗಿರುತ್ತಾರೆ.

ಈ ನ್ಯಾಯ ಪಂಚಾಯತಿಯಲ್ಲಿ ಒಂದು ಕೊರೆ ಎಂದರೆ ಮಹಿಳೆಯರು ನ್ಯಾಯಪೀಠದಲ್ಲಿ ಅಲಂಕರಿಸದಿರುವುದು. ಹಾಗಿದ್ದರೂ ಹಿರಿಯ ಮಹಿಳೆ ಯರೂ ನ್ಯಾಯ ಪಂಚಾಯತಿಯಲ್ಲಿ ನಿರರ್ಗಳವಾಗಿ ಮಾತನಾಡಿ ಭಾವನೆ ಗಳನ್ನು ವ್ಯಕ್ತಪಡಿಸುತ್ತಾರೆ.

**ಹಂಚಿಕೊಂಡು ತಿನ್ನುವುದು**

'ಜಗತ್ತಿನ ಹಸಿವು ಕಾಡುತ್ತಿರುವುದು ಆಹಾರದ ಅಭಾವದಿಂದಲ್ಲ; ಅದು ಹಂಚಿಕೆಯ ಅಭಾವದಿಂದ' ಎಂದು ವಿಶ್ವಸಂಸ್ಥೆ ಹೇಳಿಕೆಯಲ್ಲಿದೆ. ಸೋಲಿಗರು ಅಷ್ಟೇ ಏಕೆ ಬಹುಮಟ್ಟಿಗೆ ಆದಿವಾಸಿ ಜನಾಂಗಗಳಲ್ಲಿ ಹಂಚಿಕೊಂಡು ತಿನ್ನುವ ಗುಣವಿದೆ. ಇದರ ಪರಿಣಾಮವೆಂದರೆ ಎಷ್ಟೇ ಕಡಿಮೆ ಆಹಾರವಿದ್ದರೂ ವಸ್ತುಗಳಿದ್ದರೂ ಹಂಚಿಕೊಳ್ಳುತ್ತಾರೆ. ತಾವು ಬೆಳೆದ ಅಲ್ಪ ಬೆಳೆಯಲ್ಲಿಯೇ ಇನ್ನೊಬ್ಬರಿಗೆ ಕೊಡುತ್ತಾರೆ.

ಮನೆಯಲ್ಲಿ ನಾಲ್ಕು ಜನರಿದ್ದರೆ ಒಂದೆರಡು ಹೆಚ್ಚಿಗೆ ರಾಗಿಮುದ್ದೆ ಮಾಡುತ್ತಾರೆ. ಎಲೆ ಮುಚ್ಚಿ ಪಕ್ಕದವರಿಗೆ ಕೊಡುತ್ತಾರೆ. ಯಾರ ಮನೆಯಲ್ಲಿ ಯಾದರೂ ದುರಾದೃಷ್ಟವಿದ್ದರೆ ಅಂತಹವರಿಗೆ ಹೀಗೆ ಆಹಾರ ಸಿಗುತ್ತದೆ.

ಈ ಪಾರಂಪರಿಕ ಜ್ಞಾನ ಲೋಕದಲ್ಲಿ ನಶಿಸಿಹೋಗಿರುವುದರಿಂದಲೇ ಜಗತ್ತಿನ ಎಲ್ಲ ಕಷ್ಟ ಕಾರ್ಪಣ್ಯಗಳು ಉಂಟಾಗಿವೆ. ಇಂತಹ ಉನ್ನತ ಚಿಂತನ ತಿರುಗಿ ಬರಲು ಸಾಧ್ಯವೇ? ಇದು ಆದಿವಾಸಿ ಜನಾಂಗದಲ್ಲಿಯಾದರೂ ಉಳಿದರೆ ಅದೊಂದು ಆಶಾಕಿರಣ.

## ಸೋಲಿಗ ಅತೀಂದ್ರಿಯ ಚಿಂತನೆಗಳು

**ಪ್ರಾಣದ ಕಲ್ಪನೆ**

ನಾಡ ಜನರಿಗಿರುವಂತೆ (ಅಂದರೆ ನಾಗರಿಕತೆಯಿಂದ ಕೂಡಿದ ಹಳ್ಳಿ ಪಟ್ಟಣ ನಗರಗಳಲ್ಲಿ ವಾಸಿಸುವ ಜನರು) ಕಾಡ ಜನರಿಗೂ ಅಂದರೆ ನಮ್ಮ ಆದಿವಾಸೀ ಜನಾಂಗಗಳಿಗೂ ಪ್ರಾಣದ ಕಲ್ಪನೆ ಬೇಕಾದಷ್ಟಿದೆ. ಬಹುಶಃ ಕಾಡಿನಿಂದಲೇ ಈ ಭಾವನೆಗಳು ನಾಡಕಡೆ ಸಾಕಷ್ಟು ಹೋಗಿರಲು ಸಾಕು. ನಾವು ಚರ್ಚಿಸುತ್ತಿರುವ ಸೋಲಿಗ ಜನಾಂಗದಲ್ಲಿ ಜೀವಿಗಳಲ್ಲಿ ಪ್ರಾಣವಿರುವುದನ್ನು ಗುರುತಿಸುತ್ತಾರೆ. ಅದನ್ನು ಸೂಲು ಎಂದು ಕರೆಯುತ್ತಾರೆ.



ಸೂಲುಗಳಲ್ಲಿ ಸಣ್ಣ ಸೂಲು ದೊಡ್ಡ ಸೂಲು ಎಂದು ಎರಡು ಬಗೆಯ ಸೂಲುಗಳನ್ನು ಹೆಸರಿಸುತ್ತಾರೆ. ಮನುಷ್ಯನ ಜೀವ ಹೋಗುವಾಗ ಮೊದಲು ಹೋಗುವುದು ದೊಡ್ಡ ಸೂಲು; ಸಣ್ಣ ಸೂಲು ಒಂದು ಘಳಿಗೆ ತಡವಾಗಿ ಹೋಗುವುದೆಂದು ನಂಬುತ್ತಾರೆ.

ಮನುಷ್ಯರಿಗಿರುವಂತೆ ಪ್ರಾಣಿಗಳಿಗೂ ಸೂಲು ಇರುತ್ತದೆ. ಸತ್ತನಂತರ ಮನುಷ್ಯರ ಪ್ರಾಣಿಗಳ ಸೂಲು ದೆವ್ವವಾಗಬಹುದು. ಸೋಲಿಗರಲ್ಲಿ ವಿಶೇಷವಾಗಿ ಕಂಡದ್ದೆಂದರೆ ಸಸ್ಯಗಳಿಗೂ 'ಸೂಲು' ಇರುತ್ತದೆಂಬುದು. ಮರ ಕಡಿದಾಗ ಆಗುವ 'ಸುಯ್ಯೆಂಬ' ಶಬ್ದ ಆ ಸೂಲು ಹೋಗುವುದರಿಂದಲೇ ಆಗುತ್ತದೆ ಎಂದು ತಿಳಿಯುತ್ತಾರೆ. ಆದ್ದರಿಂದಲೇ ಮರ ಕಡಿದರೆ ಕ್ಷಮೆ ಯಾಚಿಸುತ್ತಾರೆ. ಪ್ರಕೃತಿಗೆ ನೋವುಂಟುಮಾಡಿದ ಭಾವನೆಯೇ ಇದಕ್ಕೆ ಪ್ರಚೋದನೆ. ಸಾಮಾಜಿಕ ಸ್ಪಂದನ. ಈ ಪಾರಂಪರಿಕ ಜ್ಞಾನ ಸಹ ಸಾಕಷ್ಟು ವೈಜ್ಞಾನಿಕವಾಗಿಯೇ ಇದೆಯೆನ್ನಬಹುದು.

**ಮಾತನಾಡುವ ದೇವರು**

ಸೋಲಿಗರು ಅನೇಕ ದೇವರುಗಳನ್ನು ಹೊಂದಿರುವಂತೆ ಕಾಣುತ್ತದೆ. ದೊಡ್ಡ ಸಂಪಿಗೆ ಸ್ವಾಮಿ, ಕೇತಪ್ಪ, ಜಡೆಯಪ್ಪ, ಸಿದ್ಧಪ್ಪ, ಪಂದಪ್ಪ, ಇತ್ಯಾದಿ ಹಾಗೆಯೇ ಮಲಕಮ್ಮ (ಮಲಕಿ ಬೆಟ್ಟದ ದೇವತೆ) ಮಾಸ್ತಮ್ಮ, ಮಾರಮ್ಮ ಮುಂತಾಗಿ ಸ್ತ್ರೀದೇವತೆಗಳು ಸಹ ಇದ್ದಾರೆ. ನಾಡಕಡೆ ದೇವರು ಗಂಭೀರ ಮೌನಿ. ಮಾತನಾಡುವುದಿಲ್ಲ. ಆದರೆ ಆದಿವಾಸಿ ಜನಾಂಗಗಳಲ್ಲಿ ದೇವರು ಮೌನಿಯಲ್ಲ, ಮಾತನಾಡುತ್ತಾನೆ. ಆತನು ಸಾಮಾನ್ಯವಾಗಿ ತಮ್ಮಡಿ (ಪೂಜಾರಿ)ಯ ಮೇಲೆ ಆವಾಹನೆಯಾಗಿ ಬರುತ್ತಾನೆ. ಈ ಲೇಖಕರ ಅನುಭವದಲ್ಲಿ ಸ್ತ್ರೀದೇವತೆ ಯಾರ ಮೇಲೂ ಬಂದದ್ದು ಕಾಣಲಿಲ್ಲ.

ಹಾಗೆ ದೇವರು ಬರುವುದು ಪೂಜೆಯ ನಂತರ. ಇದಕ್ಕಾಗಿ ತಮ್ಮಡಿ ಉಪವಾಸಾದಿಗಳನ್ನು ಆಚರಿಸಿರುತ್ತಾರೆ. ಪೂಜಾರಿಯಷ್ಟೆ ಅಲ್ಲ ಯಾರ

ಮೇಲೆ ಬೇಕಾದರು ಸ್ವಾಮಿ ಬರಬಹುದು. ತಾನು ಯಾರ, ಯಾವ ದಿಕ್ಕಿನಿಂದ ಬಂದಿದೆಯೆಂಬುದಾಗಿ ದೇವರು ಹೇಳುತ್ತದೆ. ಪವಾಡ ತೋರಿಸುತ್ತದೆ; ಕತ್ತಿಯಿಂದ ಮೈಗೆ ಹೊಡೆದುಕೊಳ್ಳುವುದು, ಮುಳ್ಳಿನ ಪಾದುಕೆ ಧರಿಸುವುದು ಇತ್ಯಾದಿ.

ಕತ್ತಿಯ ಪಾವಡ ರತ್ತದ ಬೊಟ್ಟು
ನಿಂದು ಕೂಗೋ ದುಂಡು ಮಾದೇವನ
ಮುಳ್ಳಾವಿಗೆ ಮಡುವಿನ ಜಂಗು
ಮೆಳ್ಳಗೆ ಬಂದರು ಮಾದೇವ

(ದುಂಡು ಮಾದೇವನನ್ನು ಕರೆ! ಕತ್ತಿ (ಎಂದರೆ ದೇವರ ಗಂಡುಗೊಡಲಿ) ಪವಾಡದ ಕತ್ತಿ, ಅದರಿಂದ ತರಿದು ರಕ್ತದ ಬೊಟ್ಟು ಕಾಣುತ್ತದೆ. ಮುಳ್ಳಿನ ಪಾದುಕೆ ಹೊಂದಿ ದೇವರು ಮೆಳ್ಳಗೆ ಬಂದರು) ಹೀಗೆ ಸೋಲಿಗರಲ್ಲಿ ದೇವರೇ ಬಂದು ಜನಗಳ ಕೂಡೆ ಮಾತನಾಡುತ್ತಾನೆ. ಮಧ್ಯವರ್ತಿಗಳ ಅಗತ್ಯವಿಲ್ಲ ತಮ್ಮಡಿ ಮೇಲೆ ದೇವರು ಆವಾಹನೆಯಾಗಿರುವುದರಿಂದ ಅವನು ಮಧ್ಯವರ್ತಿಯಲ್ಲವೇ ಅಲ್ಲ.

ಸಣ್ಣ ಉಲ್ಲಾಲಿ ಉದಿರಕ್ತರ
ಸರಣರಿಲ್ಲ ಮಾದೇವ

(ಸಣ್ಣ ಹುಲ್ಲಿನಲ್ಲಿ ರುದ್ರಾಕ್ಷಿ ಮಾಡಿಕೊಂಡಿರುವ ಮಾದೇವನನ್ನು ಕರೆ. ಇಲ್ಲಿ ಸರಣರು ಯಾರೂ ಇಲ್ಲ)

ಈಗ ಜನರು ನೇರವಾಗಿ ಪ್ರಶ್ನೆಗಳನ್ನು ಕೇಳುತ್ತಾರೆ ದೇವರಿಗೆ. ದೇವರು ಅತ್ಯಂತ ಕರುಣೆಯಿಂದ ಉತ್ತರ ಕೊಡುತ್ತಾನೆ. ದೇವರು ಸಂಬೋಧಿಸುವುದಾದರೂ ಹೇಗೆ? 'ನನ್ನ ಶಿಶುವೇ' ಎಂಬುದಾಗಿ!

ಮಂತ್ರವಿಭೂತಿ ಭಕ್ತರಿಗೆ ದೊರೆಯುತ್ತದೆ. ಖಾಯಿಲೆಗಳು ಗುಣವಾಗುವ, ಸಮಸ್ಯೆಗಳು ಪರಿಹಾರವಾಗುವ ಆಶ್ವಾಸನೆಗಳು ದೊರೆಯುತ್ತದೆ. ಇದಕ್ಕಾಗಿ ಅವರು ಹೆಚ್ಚಿನ ಹಣ ಖರ್ಚು ಮಾಡಬೇಕಾಗಿಲ್ಲ. ಕೇವಲ ಒಂದೆರಡು ರೂಪಾಯಿ. ಎಲೆ ಅಡಿಕೆ ಗಂಧದ ಕಡ್ಡಿ ಇಟ್ಟರೆ ಸಾಕು. ಹೀಗೆ ದೇವರು ಕಡುಬಡವರಿಗೂ ಖಂಡಿತವಾಗಿ ದೊರಕುತ್ತಾನೆ.



## ಸಾವಿನ ಸ್ವೀಕಾರ

ಸೋಲಿಗ ಪಾರಂಪರಿಕ ಆಚರಣೆಯಲ್ಲಿ ನಾವು ಕಾಣುವುದೆಂದರೆ ಸಾವಿನ ಬಗ್ಗೆ ಸಹಜವೆಂಬ ಭಾವ. ಅತಿ ಚೀರಾಟವಾಗಲಿ. ಗೋಳಾಟವಾಗಲಿ ಇಲ್ಲಿ ಕಾಣುವುದಿಲ್ಲ. ಅವರವರ ಕುಟುಂಬದ ಶವಸಂಸ್ಕಾರ ಸ್ಥಳದ ಬಳಿಯೇ ಸಂಸ್ಕಾರ ನಡೆಯುತ್ತದೆ. ಶವವನ್ನು ಹೂಳಲಾಗುತ್ತದೆ.

ಇವರಲ್ಲಿ ಗಮನಿಸಬಹುದಾದ ಅಂಶಗಳೆಂದರೆ ಸಾವಿನ ಸ್ವೀಕಾರ. ಕಷ್ಟಜೀವಿಗಳಾಗಿ ಆಕಸ್ಮಿಕಗಳಲ್ಲಿಯೇ ಬಾಳು ಸವೆಸುವ ಸೋಲಿಗರಿಗೆ ಇದು ಸಹಜವೆಂದು ಅನ್ನಿಸುವುದೂ ಸಹಜವೇ. ಆಹಾರ ನೀರು ಬೆಂಕಿಪೊಟ್ಟಣ ಮಚ್ಚು ಮುಂತಾದುವನ್ನು ಇಡುವುದು ಸತ್ತನಂತರ ಜೀವನು ಇನ್ನೂ ಇರುವನೆಂಬುದಾಗಿ ಇರುವ ನಂಬಿಕೆಯನ್ನು ಸೂಚಿಸುತ್ತದೆ. ನಾಡಕಡೆಯೂ ಮುನ್ನಿನ. ಈ ಆದಿವಾಸಿ ನಂಬಿಕೆಗಳು ಹರಿದು ಬಂದಿರುವಂತೆ ಕಾಣುತ್ತದೆ.

ಹೀಗೆ ಸೋಲಿಗ ಜನಾಂಗದ ಅತೀಂದ್ರಿಯ. ಆಧ್ಯಾತ್ಮಿಕ ವಿಚಾರ ಲಹರಿಯು ಸಾಂಪ್ರದಾಯಿಕ ಸಮುದಾಯದಷ್ಟೆ ಗಹನವಾಗಿ ಹರಿದು ಮನುಷ್ಯ ಜೀವನಕ್ಕೆ ಅರ್ಥವನ್ನು ಮತ್ತು ನೆಮ್ಮದಿಯನ್ನು ಕೊಡುವ ಶಕ್ತಿಯನ್ನು ಹೊಂದಿದೆ.

## ೪. ಆದಿವಾಸಿ ಸಂಸ್ಕೃತಿಯಲ್ಲಿ ವಿಶ್ವಶಾಂತಿ ಹೊಂಗಿರಣ

### ಸಂಸ್ಕೃತಿ ಮತ್ತು ನಾಗರಿಕತೆ

ಯಾವುದೇ ಸಮುದಾಯದ ಜೀವನಶೈಲಿಯು ನಾಗರಿಕತೆಯೆನಿಸಿ ಕೊಂಡರೆ. ಅದರ ಅಂತರಾಳವು ಸಂಸ್ಕೃತಿಯಾಗುವುದು. ಅನೇಕ ಬಾರಿ ಇವೆರಡನ್ನೂ ನಾವು ಒಟ್ಟೊಟ್ಟಿಗೆ ಪರಿಗಣಿಸುತ್ತಾ ಅರ್ಥೈಸುವೆವು. ನಾಗರಿಕತೆಗಳ ಬಗ್ಗೆ ಹೇಳುವಾಗ ಸಂಸ್ಕೃತಿಯನ್ನೇ ಸಂಬೋಧಿಸಿರುವೆವು. ಸಾಮಾನ್ಯವಾಗಿ ನಾಗರಿಕತೆಯು ಜೀವನವನ್ನು ಸುಗಮ ಮಾಡುವ, ಹೊರಪ್ರಪಂಚದ ಬಾಳಿನಲ್ಲಿ ಸುಖ ತರುವ, ಹೊಂದಿಕೊಂಡು ಬಾಳುವ, ಅನೇಕ ವಸ್ತುಗಳ ಮತ್ತು ಪರಿಕರಗಳ ಆವಿಷ್ಕಾರ ಮಾಡಿ ಅದನ್ನು ಉಪಯೋಗಿಸಿಕೊಳ್ಳುವ ಆಶಯವನ್ನು ಹೊಂದಿರುವುದು. ಸಂಸ್ಕೃತಿ ಯಾದರೋ ಮಾನವನ ಹೃದಯಾಂತರಾಳದ ಭಾವನೆಗಳಿಂದ ಹೊರ ಹೊಮ್ಮಿ ಸೃಜನತೆಯಲ್ಲಿ ರೂಪುಗೊಂಡು, ಒಂದು ಸಮುದಾಯದ ಅಂತರ್ವಾಣಿಯಾಗಿ ಪ್ರತಿಧ್ವನಿಸುವುದು. ನಾಗರಿಕತೆಯು ಸಾಮಾಜಿಕ ಬಾಹ್ಯ ಅಭಿವೃದ್ಧಿಯಲ್ಲಿ ಪ್ರಕಟವಾದರೆ ಸಂಸ್ಕೃತಿಯು ಮನುಷ್ಯನ ಸುಪ್ತ ಚೇತನ, ಶಕ್ತಿಗಳ ಉನ್ನತಿಯಲ್ಲಿ ನೈತಿಕ ಆಧ್ಯಾತ್ಮಿಕ ಬೆಳವಣಿಗೆಯಲ್ಲಿ ಆಂತರಿಕ ಸೌಂದರ್ಯದ ಅಭಿವ್ಯಕ್ತಿಯಲ್ಲಿ ಕಂಗೊಳಿಸುವುದು.

### ಸಂಸ್ಕೃತಿವಿಹೀನ ನಾಗರಿಕತೆ ಸಲ್ಲ

ಮೊದಲಿಗೆ ಆದಿಮಾನವನ ಆಹಾರ ಸಂಗ್ರಹಣೆಯ ಕ್ರಿಯೆಯಿಂದ ಪ್ರಾರಂಭವಾದ ನಾಗರಿಕತೆಯು ನಂತರ ಮಾನವ ವ್ಯವಸಾಯವನ್ನು ಪ್ರಾರಂಭಿಸಿದಾಗ ಸಾಂಸ್ಕೃತಿಕವಾದಂತೆ ತೋರುತ್ತದೆ. ಈ ವ್ಯವಸಾಯವನ್ನು ಮಹಿಳೆ ಪ್ರಾರಂಭಿಸಿದಳು ಎಂಬ ವಾದವಿದೆ. ಭೂಮಿಯೊಡನೆ ಸಂಪರ್ಕ ವಿರಿಸಿ ಮಾಡುವ ವ್ಯವಸಾಯವು ಆಹ್ಲಾದಕರ ಮಣ್ಣಿನವಾಸನೆಯನ್ನು



ಸೂಸಿ, ಕೋಮಲ ಭಾವನೆಗಳ ಮತ್ತು ಹೆಚ್ಚಿನ ಸಹನೆಯ ಮಹಿಳೆ ಈ ಕಾರ್ಯ ಕೈಗೊಂಡುದು ಸಹಜವಾಗಿಯೇ ಕಾಣುತ್ತದೆ. ನಂತರದ ಸಾವಿರಾರು ವರ್ಷಗಳಲ್ಲಿ ಸಂಸ್ಕೃತಿ ನಾಗರಿಕತೆಗಳು ವೃದ್ಧಿಗೊಂಡು ಇಂದಿನ ವರೆಗೂ ಬೆಳೆದುಬಂದಿದೆ. ಇತ್ತೀಚೆಗೆ ಪ್ರಜ್ವಲಿಸುತ್ತಿರುವ ವೈಜ್ಞಾನಿಕ ತಾಂತ್ರಿಕಯುಗದಲ್ಲಿ ತೋರಿಕೆಯ ನಾಗರಿಕತೆಯೇ ಮೇಲುಗೈ ಸಾಧಿಸಿದಂತೆ ಕಂಡುಬರುತ್ತದೆ. ಈ ಅಸಮತೋಲನ ಅವೈಜ್ಞಾನಿಕ ಬೆಳವಣಿಗೆಯಿಂದ ಒಂದು ವಿಪರೀತ ಪರಿಸ್ಥಿತಿಯುಂಟಾಗಿದೆಯೆಂದರೆ ತಪ್ಪಲ್ಲ. ಅಂದು ಕೋಲು ಬಡಿಗೆಗಳಿಂದ, ಬಿಲ್ಲುಬಾಣಗಳಿಂದ ಹೋರಾಡಿದ ಮಾನವ ಇಂದು ಮದ್ದು ಗುಂಡುಗಳಿಂದ, ಕ್ಷಿಪಣಿ-ಬಾಂಬುಗಳಿಂದ ಹೋರಾಡುತ್ತಿದ್ದಾನೆ. ಮೂಲ ಪ್ರವೃತ್ತಿ ಬದಲಾಯಿಸದೆ ಬೆಳೆಯುವ ಸಂಸ್ಕೃತಿವಿಹೀನ ನಾಗರಿಕತೆಯು ವಿಷಫಲಗಳನ್ನು ಕೊಡುವುದು. ಈ ಕವಿವಾಣಿಯನ್ನು ಗಮನಿಸಿ:

ನರ ಹೃದಯದ ಬಿಸಿ ರಕ್ತದ
ಬಾಯಾರಿಕೆ ಆರಿಲ್ಲ;
ದಾರಿದ್ರ್ಯದ ಕರುಳಿರಿಯುವ
ಧನದಸಿಮೊನೆ ಮಾಸಿಲ್ಲ;
ಪಲ್ಗಿರಿದಿದೆ ಕ್ರೋಧದ ಮುಖ,
ನಖವೆತ್ತಿದೆ ಕಾರ್ಪಣ್ಯ;
ನರಳುತ್ತಿದೆ ಲೋಕದ ಸುಖ
ಹೆಡೆಯೆತ್ತಿದೆ ದೌರ್ಜನ್ಯ!
ಜನ ಕಂಡರೆ ಜನ ಹೆದರಿದೆ;
ಎಲ್ಲೆಲ್ಲಿಯು ಸಂದೇಹ!
ಶಾಂತಿಯ ಪರದೆಯ ಹಿಂಗಡೆ
ಕ್ರಾಂತಿಯ ರಣ ಸನ್ನಾಹ!

ನರ ನೀಚತೆ ಮಾರೀಚತೆ
ದೇಶಪ್ರೇಮದ ನೆವದಿ
ದಂಷ್ಟ್ರಾಶ್ರಿತ ರಾಷ್ಟ್ರಂಗಳ
ಅಸು ಹಿಂಡುತ್ತಿದೆ ಜವದಿ!

('ಶತಮಾನ ಸಂಧ್ಯೆ' — ಕುವೆಂಪು)

## ಶುಷ್ಕ ನಾಗರಿಕತೆಯ ಸಮಸ್ಯೆಗಳು

ಹೀಗೆ ಬಹುಮಟ್ಟಿಗೆ ಸಾಮಾಜಿಕ ಆರ್ಥಿಕ ಅಭಿವೃದ್ಧಿಯಿಂದ ಗುರುತಿಸಲ್ಪಡುವ ನಾಗರಿಕತೆಯು ಕೆಲವು ಬಾರಿ ಅಮಾನವೀಯವಾಗಿಯೂ ಪರಿವರ್ತನೆ ಹೊಂದಬಲ್ಲದು. ಇಂದು ಎಲ್ಲೆಡೆ ತಲೆಯೆತ್ತುತ್ತಿರುವ ಸಂಘಟಿತ ಅಪರಾಧ. ಮೂಲಭೂತವಾದಗಳು, ಹಿಂಸೆ, ವ್ಯಾಪಾರೀ ಮನೋಭಾವ, ಮಾದಕವಸ್ತು ಸೇವನೆ, ಬಹುವಸ್ತು ಉಪಯೋಗಿ ಜಾಡ್ಯ, ಸ್ಥಳೀಯ ಜ್ಞಾನವನ್ನು ಕಡೆಗಣಿಸಿ ಬಹುರಾಷ್ಟ್ರೀಯ ವಸ್ತುಗಳ ತಾಂತ್ರಿಕತೆಯ ಮೇಲೆ ಮೋಹ, ಪರಿಸರದ ಮೇಲೆ ತೀವ್ರ ಆಕ್ರಮಣ, ಬಾಲಾಪರಾಧ, ಆತ್ಮಹತ್ಯೆ ಇನ್ನೂ ಹತ್ತು ಹಲವಾರು ಸಮಸ್ಯೆಗಳು ನಾಗರಿಕತೆಯು ಮೂಲ ಮಾನವ ಸಂಸ್ಕೃತಿಯಲ್ಲಿ ನೆಲೆ ಹೊಂದದೇ ಇರುವುದರಿಂದಲೇ ಆಗಿದೆ. ಇದಕ್ಕೆ ಕುಮ್ಮಕ್ಕಾಗಿ ಇಂದಿನ ಮುದ್ರಣ ಹಾಗೂ ಇಲೆಕ್ಟ್ರಾನಿಕ್ ಮಾಧ್ಯಮಗಳು ಅಹರ್ನಿಶಿ ದುಡಿಯುತ್ತಿವೆ.

ಮತ್ತೊಂದು ವಿಷಯವೆಂದರೆ ಜಗತ್ತಿನ 'ಬುದ್ಧಿವಂತ' ಜನರು ಮತ್ತು ಸಮುದಾಯಗಳು ಅಂದರೆ ಕೇವಲ ಸುಮಾರು ಪ್ರತಿಶತ ಇಪ್ಪತ್ತು ಜನರು ಮಾತ್ರ ತಮ್ಮ ತಮ್ಮ ಸ್ಥಳದ ಸಂಪನ್ಮೂಲಗಳಿಗೆ ಒಡೆತನ ಸಾಧಿಸಿ ಮಿಕ್ಕ ಪ್ರತಿಶತ ಎಂಬತ್ತು ಜನರನ್ನು ಮೂಲೆಗುಂಪು ಮಾಡಿದ್ದಾರೆ. ಇನ್ನು ನಿತ್ಯದ ಬಾಳಿನಲ್ಲಿಯೂ ಇವರೇ ಪ್ರಪಂಚದ ನಿಜವಾದ ಪ್ರಜೆಗಳೆಂದು ಭಾವಿಸಿಕೊಂಡು ನಡೆದುಕೊಳ್ಳುವ ಭರದಲ್ಲಿ ಮಿಕ್ಕ ಎಂಬತ್ತು ಭಾಗ ಜನರ ಶಾಂತಿ



ಸುಖ ಸ್ವಾತಂತ್ರ್ಯಗಳು ಛಿದ್ರವಾಗಿರುವುದು ಮಾತ್ರವಲ್ಲದೆ ಅವರೆಲ್ಲ ಶೋಷಣೆಗೆ ಒಳಗಾಗಿದ್ದಾರೆ. ಅಭಿವೃದ್ಧಿ ಹೊಂದಿದ ಜನರು ವಿಶಾಲ ಜಗತ್ತಿಗೆ ಸ್ಪಂದಿಸದೆ ಹೃದಯ ವಿಹೀನರಾಗುತ್ತಿರುವುದು ಕಂಡುಬರುತ್ತಿದೆ.

ಇದರ ಪರಿಣಾಮವೇನೆಂದರೆ ಕೇವಲ ಹಣಗಳಿಕೆ, ಆಂತರಿಕ ಉನ್ನತಿಯನ್ನೇ ಮರೆತಿರುವ ಬಾಹ್ಯಾಡಂಬರ ಜೀವನ ಮತ್ತು ಜನಸಾಮನ್ಯರನ್ನು ಲೆಕ್ಕಿಸದೆ ಕೆಲವೇ ಜನರು ತಮ್ಮ ಸುಖಕ್ಕಾಗಿ ಬಡಜನರನ್ನು ದುಡಿಸಿಕೊಳ್ಳುವುದಾಗಿದ್ದು ಇವೆಲ್ಲವೂ ಸಂಸ್ಕೃತಿಯನ್ನು ಮರೆತು ವಿಕೃತಿಯತ್ತ ವಾಲಿದೆ.

ಇದರಿಂದ ನಮಗೆ ತಿಳಿದುಬರುವುದೆಂದರೆ ಇಂದಿನ ಪ್ರಪಂಚ ನಾಗರಿಕತೆಯು ಸ್ವಲ್ಪಮಟ್ಟಿಗೆ ಸಮಾನತೆ, ಮಾನವ ಹಕ್ಕುಗಳು ಮೊದಲಾದ ವಿಷಯಗಳ ಮೇಲೆ ಬೆಳಕು ಚೆಲ್ಲಿದರೂ ಇನ್ನೂ ಸಾಧಿಸಬೇಕಾದ್ದು ಬಹಳಷ್ಟಿದೆ. ಬರಿಯ ಸೊಗಸಿನ ಪೋಷಾಕಿನಿಂದ ನಾಗರಿಕತೆ ಬರಲಾರದು. ತಾಂತ್ರಿಕ ಉನ್ನತಿಯಿಂದಲೂ ಮಾನವ ನೈತಿಕನಾಗಲಾರ. ಇನ್ನು ವಿಶ್ವಶಾಂತಿಯೆಲ್ಲಿ ಸಾಧ್ಯ?

ಇದಕ್ಕೆಲ್ಲ ಸೂಕ್ತ ಪರಿಹಾರವೆಂದರೆ ನಾವು ಜೀವನಕ್ಕೆ ಅರ್ಥಕೊಡುವ ಸಂಸ್ಕೃತಿಯನ್ನು ನಮ್ಮ ಆಧಾರಸ್ಥಂಭವನ್ನಾಗಿ ಮಾಡಿಕೊಳ್ಳುವುದು.

## ಸಂಸ್ಕೃತಿ ಮಾನವ ಕೃತ

ಪ್ರಕೃತಿಯು ನೈಸರ್ಗಿಕವಾಗಿದ್ದರೂ ಸಂಸ್ಕೃತಿಯು ಮಾನವ ಕೃತವಾಗಿ ಆಂತರಿಕ ಬೆಳವಣಿಗೆಯ ದ್ಯೋತಕವಾಗಿದ್ದು ಮಾನವ ಛಾಪನ್ನು ಹೊಂದಿದೆ. ಆದ್ದರಿಂದಲೇ ಇದರಲ್ಲಿ ಮಾನವ ಮೌಲ್ಯಗಳು ಪರಿಪಕ್ವ ಹೊಂದಿವೆ. ನಾಗರಿಕತೆಯು ಬಿಸಿಲ ಬೇಗೆಯಾದಾಗ ತಂಪನ್ನು ನೀಡು

ವುದು ಸಂಸ್ಕೃತಿಯ ನೆರಳೇ, ಅದಕ್ಕೆ ಕಾರಣ ಸಂಸ್ಕೃತಿಯು ತನ್ನ ಪಕ್ವತೆಗೆ ನೆಲೆಯಾದ ಅಧ್ಯಾತ್ಮವನ್ನು ಒಡಗೂಡಿಸಿಕೊಂಡಿರುವುದು. ಸತ್ಯಶಿವ ಸೌಂದರ್ಯವನ್ನು ಆರಾಧಿಸುತ್ತಿರುವುದು.

ಸಂಸ್ಕೃತಿಯ ಗುರಿಯು ಜೀವನದ ಆನಂದ ದರ್ಶನವೇ. ಆದರೆ ಸಂಸ್ಕೃತಿಯು ಜೀವನ ಅನುಭವ ದರ್ಶನ. ಅದು ಕೆರೆದರೆ ಉದುರಿ ಹೋಗುವ ನಾಗರಿಕತೆಯಂತಲ್ಲ. ಜೀವನದ ಆಳಸ್ತರಗಳಲ್ಲಿ ನೂರಾರು ವರ್ಷಗಳ ಆಸೆ ಆಕಾಂಕ್ಷೆ ಅನುಭವ ಸಾಧನೆಗಳು ರೂಪುಗೊಂಡು ಸಂಸ್ಕರಿತ ವಾಗಿ ಸಂಸ್ಕೃತಿಯಲ್ಲಿ ಹರಳುಗಟ್ಟುವುದು. ಪ್ರಾಣಿಗಳು ಪ್ರಕೃತಿಯ ಮಿತಿ ಯಲ್ಲಿ ಮಾತ್ರ ವರ್ತಿಸಬಲ್ಲವು. ಸಹಪ್ರಾಣಿಗಳೊಡನೆ, ಮಾನವನೊಡನೆ ಕೃತಜ್ಞತೆ, ಪ್ರತ್ಯುಪಕಾರ ಮುಂತಾದ ಗುಣಗಳನ್ನು ತೋರಬಲ್ಲವು. ಆದರೆ ವಿರೋಧಿಗಳೊಡನೆಯೂ ಅಹಿಂಸೆ, ಪ್ರೇಮ, ಕ್ಷಮೆ ಮುಂತಾದುವು ಮಾನವ ಸಂಸ್ಕೃತಿಯ ವಿಶಾಲ ಪ್ರಪಂಚಕ್ಕೆ ಮಾತ್ರ ಸೇರುವುದು. ಜೀವನದ ಪರಿಪೂರ್ಣ ಪ್ರಕಾಶನ ಸಂಸ್ಕೃತಿಯಲ್ಲಿ ಆಗಬಲ್ಲುದು. ಧಾರ್ಮಿಕ ಸಹಿಷ್ಣುತೆ, ಪರಸ್ಪರ ಸ್ವೀಕರಣೆ, 'ಮನುಜಕುಲ ತಾನೊಂದೆ ವಲಂ' ಎಂಬ ಭಾವ, ಸಕಲಜೀವಿಗಳಿಗಾಗಿ ಸ್ಪಂದನ ಇವೆಲ್ಲವೂ ಪೂರ್ಣವ್ಯಕ್ತವಾದಾಗಲೇ ಸಂಸ್ಕೃತಿಯ ಪರಿಪೂರ್ಣತೆ.

ಹಾಗದರೆ 'ಸಂಸ್ಕೃತಿ'ಯ ಹೆಸರಿನಲ್ಲಿ ಮತ್ತೊಂದು ಮುಖವನ್ನು ನಾವು ಕಾಣುತ್ತೇವಲ್ಲ? ಚಾಕು ಚೂರಿ ಸಂಸ್ಕೃತಿ ಎಂಬ ಬಳಕೆಯಿದೆಯಲ್ಲ? ಅದನ್ನು ಸಂಸ್ಕೃತಿಯೆಂದು ಕರೆಯಲಾಗದು. ಅದು ವಿಕೃತಿ. ಮಾನವನು ಸತ್ಯವೂ ಸುಂದರವೂ ಆದ ಸಂಸ್ಕೃತಿಯಲ್ಲಿ ನೆಲೆಗೊಳ್ಳದಿದ್ದರೆ ವಿಕೃತಿಯೆಡೆಗೆ ಸಾಗುವನು. ಈ ಅಪಾಯವು ತೂಗುಕತ್ತಿಯಾಗಿ ತಲೆಯ ಮೇಲೆ ನೇತಾಡು ತ್ತಿರುವುದು. ತನ್ನ ಅಳಿವು ಉಳಿವನ್ನು ಮಾನವನೇ ನಿರ್ಧರಿಸಬೇಕಾಗಿದೆ.



## ಸಂಸ್ಕೃತಿ ಹಿನ್ನೆಲೆಯಲ್ಲಿ ಮೌಲ್ಯಗಳು

ಮಾನವ ಮೌಲ್ಯಗಳು ಅರಳುವುದು ಸಂಸ್ಕೃತಿಯ ಸರಸ್ಸಿನಲ್ಲಿಯೇ. ಸತ್ಯ ಪ್ರೇಮ ಸೌಂದರ್ಯಗಳು ಎಲ್ಲ ಸಮುದಾಯ ದೇಶಕಾಲಗಳಿಗೆ ಸಲ್ಲುವ ವಿಚಾರಗಳಾದರೆ ಅತ್ಯಂತ ಪ್ರಾಚೀನವಾದ ಗಿರಿಜನ ಸಂಸ್ಕೃತಿಗಳಲ್ಲಿ ಹಂಚಿ ತಿಂದು ಬಾಳುವ, ಸರಳತೆಯೇ ಮೂರ್ತಿವೆತ್ತಂತೆ ಜೀವಿಸುವ ಔದಾರ್ಯವಿದೆ. ಮಾನವ ಗೌರವ, ಹಕ್ಕುಗಳು ಮತ್ತು ಸಮಾನತೆಯ ಮೂಲ ಮಂತ್ರವಿರುವುದೂ ಈ ಸಂಸ್ಕೃತಿಯ ಆಧಾರದಲ್ಲಿಯೇ.

## ಕಲೆಗಳು

ಮಾನವ ಮೌಲ್ಯಗಳು ಸಂಸ್ಕೃತಿಯ ಸರಸ್ಸಿನ ಒಂದು ಬಗೆಯ ಹೂಗಳಾದರೆ ಕಲೆಗಳು ಮತ್ತೊಂದು ಬಗೆಯ ಸುವಾಸನೆಯ ಕುಸುಮ ಗಳಾಗಿ ಸ್ವಾಗತಿಸುತ್ತವೆ. ಗವಿಯಲ್ಲಿದ್ದ ಆದಿಮಾನವನೂ ಚಿತ್ರ ಬಿಡಿಸಿದ್ದರೆ ನಂತರದವರು ಹಾಡಿ ಕುಣಿದು ಪ್ರಕೃತಿಯ ಬಗ್ಗೆ ಜೀವನದ ಬಗ್ಗೆ ತಮ್ಮ ಯೋಚನಾಶಕ್ತಿಯನ್ನು ಹರಿಸಿ ಕಲ್ಪನೆಯಲ್ಲಿಯೂ ಮೆರೆದು ಸಂಸ್ಕೃತಿಯನ್ನು ಶ್ರೀಮಂತವಾಗಿಸಿದ್ದಾರೆ. ಈ ಮಧುರ ವಿಚಾರ ಲಹರಿಯೇ ಜಾನಪದವಾಗಿ ಮೂಡಿ ಬಂದಿದೆ.

## ಸಂಸ್ಕೃತಿ ಬೆಳಕಿನ ಕಿಂಡಿಯಂತೆ

ಸಂಸ್ಕೃತಿಗೆ ಆಘಾತಗಳನ್ನು ಸಹಿಸಿಕೊಳ್ಳುವ, ಸಾಮಾಜಿಕ ಏರುಪೇರು ಗಳನ್ನು ಸಮಮಾಡುವ, ಅನೇಕ ವೇಳೆ ಕಾಲನ ದಾಳಿಯನ್ನು ಧಿಕ್ಕರಿಸುವ ಶಕ್ತಿಯೂ ಇರುವುದು ಕಂಡುಬರುತ್ತದೆ. ನಾಗರಿಕ ಸಂಸ್ಕೃತಿಗಳಿಗಿಂತಲೂ ಸಾವಿರಾರು ವರ್ಷ ಹಳೆಯದಾದ ಆದಿವಾಸಿ ಸಂಸ್ಕೃತಿಗಳು ಬಹುಶಃ ಏಕಾಂತದಲ್ಲಿದ್ದೋ ಅಥವಾ ಹೊಡೆತಗಳನ್ನು ಜೀರ್ಣಿಸಿಕೊಂಡೋ ಅಥವಾ ತಕ್ಕಮಟ್ಟಿಗೆ ಸ್ವೀಕರಿಸಿಯೋ, ಹೇಗೋ ತಮ್ಮ ಹಳೆತನವನ್ನು ಉಳಿಸಿಕೊಂಡಿದೆ. ಕಾಲನ ಗರ್ಭದಲ್ಲಿ ಇದ್ದಿರಬಹುದಾದ ಜೀವನ ವಿಧಾನ,

ನಂಬಿಕೆಗಳು ಆಚರಣೆಗಳು ಮೊದಲಾದುವುಗಳಿಗೆ ಇವು ಬೆಳಕಿನ ಕಿಂಡಿಗಳಾಗಿ ತೋರುತ್ತವೆ.

ಸಂಸ್ಕೃತಿಯು ವೈಯಕ್ತಿಕವಾಗಿ ಸಾಮುದಾಯಿಕವಾಗಿ ಅಥವಾ ಇನ್ನೂ ದೊಡ್ಡ ರಾಜ್ಯ ರಾಷ್ಟ್ರದ ಸಂಸ್ಕೃತಿಯಾಗಿ ಇರಲು ಸಾಧ್ಯ. ಮಟ್ಟವು ಯಾವುದೇ ಆದರೂ ಇವುಗಳು ಮೂಡಿ ಬರುವ ಬೆಳೆಯುವ ವಿಧಾನಗಳು ಸಾಮಾನ್ಯವಾಗಿ ಎಲ್ಲರ ಅನುಭವದವುಗಳೇ. ದೀರ್ಘಕಾಲದ ಮಾನವನ ಆಸೆ ಆಕಾಂಕ್ಷೆ ಕ್ರಿಯೆಗಳೂ ಜೀವನ ವಿಧಿ ವಿಧಾನಗಳೂ ಪ್ರಕೃತಿಯ ಹಿನ್ನೆಲೆಯಲ್ಲಿ ಅನೇಕಾನೇಕ ಸಂದರ್ಭಗಳ ಕ್ರಿಯೆ ಪ್ರಕ್ರಿಯೆಯಲ್ಲಿ ಸಿಲುಕಿ ಕಾಲನ ಮೂಸೆಯಲ್ಲಿ ಕರಗಿ ನಂತರ ಹರಳಾಗಿ ನಮಗೆ ಗೋಚರಿಸುವುದು. ಸಂಸ್ಕೃತಿಯು ಪರಿಪಕ್ವವಾಗುವುದು ಅದು ವಿಶ್ವದ ವಿಶಾಲ ಆಯಾಮ ಹೊಂದಿ ಮೂಲ ಮಾನವ ಸಂಸ್ಕೃತಿಯಾದಾಗ ಮಾತ್ರ ಸಾಧ್ಯ. ಯಾವುದೇ ಎರಡು ಅಥವಾ ಇನ್ನೂ ಹೆಚ್ಚು ಸಂಸ್ಕೃತಿಗಳು ಒಂದಕ್ಕೊಂದು ಹೊಂದಿಕೊಳ್ಳುವುದು, ಪೂರಕವಾಗುವುದು ಮುಂತಾದ ಪ್ರಕ್ರಿಯೆಗಳಿಗೆ ಕಾರಣ ಅವುಗಳ ಉಗಮ ಮಾನವ ಹೃದಯದಿಂದಾದುದರಿಂದಲೇ ಆಗುತ್ತದೆ.

ಈ ಹಿನ್ನೆಲೆಯಲ್ಲಿ ಎಲ್ಲರಲ್ಲೂ ಪ್ರೇಮ ಸದ್ಭಾವನೆ ಬಿತ್ತುವ ವಿಶ್ವಸಂಸ್ಕೃತಿಗಾಗಿ ಹಂಬಲಿಸುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಇವರನ್ನು ದಾರ್ಶನಿಕರು ಎನ್ನಬಹುದಲ್ಲವೇ? ಈ ರೀತಿಯ ಸಂಸ್ಕೃತಿ ಮೂಡಬೇಕಾದರೆ, ಪರಿಹಾರವು 'ನಾಗರಿಕ ಸಂಸ್ಕೃತಿ'ಗಳಲ್ಲಿ ಸಿಗಲಾರದು. ಅದನ್ನು ಸರಳ ಪ್ರೇಮಮಯಿ ಆದಿವಾಸಿ ಸಂಸ್ಕೃತಿಗಳಲ್ಲಿ ಗುರುತಿಸಿ ಅಂತಹ ಆಧಾರದ ಮೇಲೆ ಮಾತ್ರ ಗಳಿಸಲು ಸಾಧ್ಯ.

**ಆದಿವಾಸಿ ಸಂಸ್ಕೃತಿಯ ವೈಶಿಷ್ಟ್ಯ**

ಹಾಗಾದರೆ ಆದಿವಾಸಿ ಸಂಸ್ಕೃತಿಯ ವೈಶಿಷ್ಟ್ಯವೇನು? ನಾಡ ಸಂಸ್ಕೃತಿಗಳಿಗಿಂತಲೂ ಅದು ಹೇಗೆ ಭಿನ್ನ? ಅತಿ ನಾಗರಿಕತೆಯ ವ್ಯರ್ಥ ಹೊರೆಗೆ



ಇದು ಹೇಗೆ ಪರಿಹಾರವಾಗಬಲ್ಲುದು? ಈ ಪ್ರಶ್ನೆಗಳಿಗೆಲ್ಲ ಸಮಂಜಸ ಪರಿಹಾರ ದೊರೆತುದಾದರೆ ನಾವು ಖಂಡಿತವಾಗಿ ನಮ್ಮ ಇರುವಿಕೆಯ ಮೂಲಗಳಲ್ಲಿಯೇ ಅದನ್ನು ಅರಸಿ ಶಾಂತಿಯನ್ನು ಪಡೆಯಬಹುದು. ಇದರ ಒಟ್ಟು ಪರಿಣಾಮದಲ್ಲಿ ವಿಶ್ವಶಾಂತಿ ಹೊಮ್ಮುವುದು. ಇಲ್ಲಿ ಎದ್ದು ಕಾಣುವ ಕೆಲವು ಅಂಶಗಳನ್ನು ಗುರುತಿಸುವ ಪ್ರಯತ್ನ ಅವಶ್ಯಕವೆಂದೆನಿಸುತ್ತದೆ, ಸಂಸ್ಕೃತಿಯ ಬೆಳಕಿನ ಕಿಂಡಿಯಿಂದಲೇ.

ಪ್ರಕೃತಿಯೊಡನೆ ಹೊಂದಾಣಿಕೆ, ಸಾಮರಸ್ಯ, ಕೂಡಿ ಬಾಳುವಿಕೆ ಗಿರಿಜನರಿಗೆ ಸಹಜ. ಇದು ಕಾರ್ಯದಲ್ಲಿ ಬರಬೇಕಾದರೆ ಅಪಾರ ಹೃದಯ ಸಂವೇದನೆ ಆವಶ್ಯಕ. ಅನೇಕ ಸಹಸ್ರವರ್ಷಗಳು ಪ್ರಕೃತಿಯೊಡನೆ ನಿರಂತರ ನಿಕಟ ಬಾಳುವೆ ನಡೆಸಿ ಅದರೊಡನೆ ಒಂದು ರೀತಿಯ ಅತೀಂದ್ರಿಯ ಸ್ಪಂದನದಲ್ಲಿ ಅವರಿರುವಂತೆ ನಮಗೆ ಕಾಣುತ್ತದೆ. ಇದರ ಪರಿಣಾಮವೆಂದರೆ ಪ್ರಕೃತಿಯನ್ನು ಅವರು ದೋಚದಿರುವುದು. ಪ್ರೀತಿಸುವವರು ದೋಚಲಾರರು. ದೋಚುವವರು ಪ್ರೀತಿಸಲಾರರು. ಆದಿವಾಸಿ ಶಬರಿ 'ಹೂಗಳನ್ನು ತಿರಿದು ತಂದ'ಳಂತೆ! ತರಿದು ತರಲಿಲ್ಲ. ಪ್ರಕೃತಿಯಲ್ಲಿ ನಾವು ಪ್ರೇಮದಿಂದ ತಿರಿದು ನಮಗೆಷ್ಟು ಸಾಕೋ ಅಷ್ಟೇ ಉಪಯೋಗಿಸಬೇಕು. 'ಜೇನು ಕೀಳುವುದು' ಎಂಬ ಉಪಯೋಗ ಆದಿವಾಸಿಗಳಲ್ಲಿ ಇಲ್ಲ. ಜೇನು 'ಅಳೆಯುವುದು' ಹೀಗೆ ಜೇನನ್ನು ಅಳೆಯಬೇಕಾದರೆ ಪೂಜೆ ಸಲ್ಲಿಸಿ ನಂತರ ಜೇನು ತೆಗೆಯಬೇಕು. ಮರಗಳಲ್ಲಿ ಗಿಡಗಳಲ್ಲಿ ಹಣ್ಣು ಕೀಳಬೇಕಾದಾಗ ಸ್ವಲ್ಪವನ್ನು ಪಕ್ಷಿಗಳಿಗೆ ಪ್ರಾಣಿಗಳಿಗೆ ಮತ್ತೆ ಗಿಡ ಬರಲು ಬೀಜಗಳಿಗಾಗಿ ಬಿಡಬೇಕು. 'ಅವೂ ಬದುಕಲಿ' ಎಂಬುದೇ ಉದ್ದೇಶ. ಕಾಡಿನ ಮೇಲೆ ಅಪಾರ ಗೌರವ; ಕಾಡಿಂದ ಕಾಡಿಗೆ ಹೋಗುವಾಗ ಹೊಸ ಕಾಡಿಗೆ ಬಂದರೆ ಅಲ್ಲಲ್ಲಿಯ ವನತಾಯಿಗೆ ನಮಿಸಬೇಕು. ಆನೆ ಎದುರಾದರೆ ನಮಿಸಬೇಕು.

'ಜಗತ್ತಿನಲ್ಲಿ ಹಸಿವಿರುವುದು ಆಹಾರದ ಅಭಾವದಿಂದಲ್ಲ ಹಂಚಿಕೆಯ ಅಭಾವದಿಂದ' ಎಂಬುದಾಗಿ ವಿಶ್ವ ಸಂಸ್ಥೆ ಹೇಳಿಕೆಯಿದೆ. ಆದ್ದರಿಂದ ಹಸಿವು ಮಾಯವಾಗಬೇಕಾದರೆ ಸರಿಯಾದ ಹಂಚಿಕೆಯಾಗಿ, ಬಚ್ಚಿಡುವುದು ನಿಲ್ಲ ಬೇಕು. ಯಾವ ಮರವೂ ಹಣ್ಣುಗಳನ್ನು ಬಚ್ಚಿಡಲಿಲ್ಲ! ಪ್ರಕೃತಿ ತನ್ನ ಸಂಪತ್ತನ್ನು ಮುಚ್ಚಿಡಲಿಲ್ಲ ಬಚ್ಚಿಡಲಿಲ್ಲ, ಮಾನವನು ಹಾಗೆ ಮಾಡಿದನು. ನೀವು ಆದಿವಾಸಿಗಳ ಹಬ್ಬವಾದ ಎರಡನೆ ದಿನ ಪೋಡಿನ ಕಡೆ ನಡೆದಲ್ಲಿ ಅವರ ನೆಂಟರಿಷ್ಟರು ಧಾನ್ಯ ತೆಗೆದುಕೊಂಡು ಹೋಗುತ್ತಿರುವುದನ್ನು ನೋಡುತ್ತೀರಿ. ಹಾಗೆಯೇ ಪ್ರತಿದಿನವೂ ಮನೆಯಲ್ಲಿ ನಾಲ್ಕು ಜನರಿದ್ದರೆ ಆರು ಮುದ್ದೆ ಮಾಡಿ ಈ ಕಡೆ ಮನೆಗೆ ಆ ಕಡೆ ಮನೆಗೆ ಒಂದೊಂದನ್ನು ಕೊಡುತ್ತಾರೆ. ಅಥವಾ ಯಾರಾದರೂ ಅಗತ್ಯವಿದ್ದವರಿಗೆ ಕೊಡುತ್ತಾರೆ. ಸೋಲಿಗರು ಬಡವರಾಗಿರಬಹುದು, ಇರುವುದನ್ನೇ ಹಂಚಿಕೊಳ್ಳುತ್ತಾರೆ.

ಒಮ್ಮೆ ಸೋಲಿಗರಿಗಾಗಿ ಮನೆಗಳನ್ನು ಕಟ್ಟಲು ಜಾಗ ಬೇಕಾಯಿತು. ನಾವು ಜಾಗಕ್ಕೆ ಪರದಾಡುತ್ತಿದ್ದಾಗ ಕೊಲ್ಲೇಗೌಡರ ಪೋಡಿನ ಕೊಲ್ಲೇಗೌಡರೇ ಹೇಳಿದ್ದೇನೆಂದರೆ "ಅದಕ್ಕೆ ಯಾಕೆ ಸ್ವಾಮಿ ಚಿಂತೆ? ನನ್ನ ಜಮೀನಿನಲ್ಲಿಯೇ ಜಾಗವನ್ನು ಕೊಡುತ್ತೇನೆ ಅಗತ್ಯವಾಗಿ ಮನೆಗಳನ್ನು ಕಟ್ಟಿ." ಅನಂತರ ಬೇರೆಡೆಯೇ ಸ್ಥಳ ಸಿಕ್ಕಿ ಅಲ್ಲಿ ಮನೆಗಳನ್ನು ಕಟ್ಟಲಾಯಿತೆನ್ನಿ. ಇಲ್ಲಿ ಗಮನಿಸ ಬೇಕಾದುದು ಏನೆಂದರೆ ಒಬ್ಬ ಆದಿವಾಸಿ ಮನುಷ್ಯ ಸ್ವಲ್ಪವೂ ತನ್ನ ನಷ್ಟವನ್ನು ಚಿಂತಿಸದೆ ಧಾರಾಳವಾಗಿ 'ನೀವು ಜನಗಳಿಗಾಗಿ ತನ್ನ ಜಮೀನಿನಲ್ಲಿ ಮನೆಗಳನ್ನು ಕಟ್ಟಿ' ಎಂದು ಹೇಳುವ ಔದಾರ್ಯ.

ಇದಕ್ಕೆ ಹಿನ್ನೆಲೆಯೆಂದರೆ ಆದಿವಾಸಿ ಜನಾಂಗಗಳಲ್ಲಿ ಸಮುದಾಯದ ಜೀವನ ನಡೆಸುತ್ತಿದ್ದು. ಅವರಿಗೆ ಸಮುದಾಯ ಆಸ್ತಿಯ ಕಲ್ಪನೆಯಿತ್ತೇ ವಿನಾ ಖಾಸಗಿ ಸೊತ್ತಿನ ಭಾವನೆಗಳಿರಲಿಲ್ಲ. ಒಮ್ಮೆ ಈ ಲೇಖಕರು ಗಿರಿಜನ ವಸತಿ ಶಾಲೆಯೊಂದರಲ್ಲಿ ಬೆಳಗಿನ ಪ್ರಾರ್ಥನೆ ನಡೆಸುತ್ತಿದ್ದಾಗ ನಡೆದ



ಘಟನೆ. ಅಂದು ವಿಪರೀತ ಚಳಿಯ ದಿನವಾಗಿತ್ತು. ಶಾಲೆಯಲ್ಲಿ ವಿತರಿಸಿದ್ದ ಸ್ವೆಟರುಗಳನ್ನು ಅನೇಕ ಬಾಲಕ ಬಾಲಕಿಯರು ಹಾಕಿಕೊಂಡಿರಲಿಲ್ಲ. ಅಲ್ಲಿಗೆ ಆ ಸಮಯಕ್ಕೆ ಬಂದ ಉಪಾಧ್ಯಾಯಿನಿಯೊಬ್ಬರು ಮಕ್ಕಳನ್ನು ನಿನ್ನ ಸ್ವೆಟರೆಲ್ಲಿ? ನೀನೇಕೆ ಸ್ವೆಟರ್ ಹಾಕಿಲ್ಲ? ಮುಂತಾಗಿ ಪ್ರಶ್ನಿಸುತ್ತಿದ್ದರು. ಮಕ್ಕಳು ಕೊಟ್ಟ ಉತ್ತರವೋ! "ನಾನು ಅವನಿಗೆ ಕೊಟ್ಟೆ! ನಾನು ಅವಳಿಗೆ ಕೊಟ್ಟೆ" ಮುಂತಾಗಿ ಹೇಳಿದರು. ತಕ್ಷಣ ಉಪಾಧ್ಯಾಯಿನಿ ಕೋಪಗೊಂಡು "ನೀನೇಕೆ ಇನ್ನೊಬ್ಬರಿಗೆ ನಿನ್ನ ವಸ್ತುವನ್ನು ಕೊಟ್ಟೆ?" ಎಂದು ಗದರಿಸಲು ತೊಡಗಿದರು. ಈ ಲೇಖಕರು ಅವರನ್ನು "ನೀವು ಸ್ವಲ್ಪ ಈಗ ಸುಮ್ಮನಿರಿ, ನಂತರ ನಿಮಗೆ ಹೇಳುವೆ" ಎಂದು ತಡೆಯಬೇಕಾಯಿತು. ನಂತರ ಅವರಿಗೆ ಆದಿವಾಸಿ ಜೀವನ ರೀತಿ ನೀತಿಯನ್ನು ವಿವರಿಸಲಾಯಿತು. ಆದಿವಾಸಿಗಳಲ್ಲಿ, 'ಇದು ನನ್ನ ವಸ್ತು. ನಾನೊಬ್ಬನೆ ಇದನ್ನು ಅನುಭವಿಸ ಬೇಕು' ಎಂಬ ಸ್ವಾರ್ಥವಿಲ್ಲ. ಇದು ನಾಡ ಕಡೆ, ನಗರದೆಡೆ ಊರಿಕೊಂಡಿ ರುವ ಜಾಡ್ಯ. ಆದಿವಾಸಿಗಳಲ್ಲಾದರೋ ಇನ್ನೊಬ್ಬರಿಗೆ ಸಂತೋಷದಿಂದ ಕೊಡುವ ಔದಾರ್ಯವಿದೆ; ಇದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳ ಬೇಕು. ಇನ್ನು 'ಮುಂದುವರಿದ ನಾಗರಿಕತೆ'ಗಳಲ್ಲಿ ಅಣ್ಣನು ತಮ್ಮನ ಶರಟನ್ನು ಹಾಕಿಕೊಂಡನೆಂದರೆ 'ನೀನೇಕೋ ಅವನ ವಸ್ತು ಮುಟ್ಟಿದೆ?' ಎಂದು ತಂದೆಯೇ ನಾಲ್ಕು ಬಾರಿಸುತ್ತಾನೆ. ಇನ್ನು ಮಕ್ಕಳು ಇನ್ನೆಂತಹ ಔದಾರ್ಯ ಕಲಿತಾರು? ಚೌಕಟ್ಟುಗಳಲ್ಲಿ ಸಿಲುಕಿ ತಮ್ಮದೇ ಸ್ವಂತಿಕೆಯ ಗೂಡು ಸುತ್ತಲೂ ಕಟ್ಟಿಕೊಂಡು 'ಮುಂದುವರಿದ' ಜನ ನರಳಾಡುತ್ತಿದ್ದಾರೆ. ಈ ವಿಚಾರವನ್ನೆಲ್ಲಾ ಚರ್ಚಿಸಲಾಯಿತು.

ಸ್ವಾಮಿ ರಾಮತೀರ್ಥರು ಒಂದೆಡೆ ಹೀಗೆ ಹೇಳುತ್ತಾರೆ, "ಉತ್ತಮ ಹವೆ ಸೇವಿಸಲು, ಅಡ್ಡಾಡಲು ನಿಮ್ಮದೇ ಸ್ವಂತ ಆಸ್ತಿಯಾದ ತೋಟ ಮುಂತಾದುವು ಬೇಕೇ? ನೀವು ಸಾರ್ವಜನಿಕ ಬಯಲಿನಲ್ಲಿ ಅಥವಾ ವನದಲ್ಲಿ ಓಡಾಡಿದರೆ ನಿಮಗದು ದೊರೆಯುವುದಿಲ್ಲವೇ?" ಆದ್ದರಿಂದಲೇ

ಗಾಂಧೀಜಿಯವರು ನುಡಿದಿರುವುದು — "ಪ್ರಕೃತಿ ಮನುಷ್ಯನ ಆವಶ್ಯಕತೆಗೆ ಏನು ಬೇಕೋ ಅದನ್ನು ಕೊಟ್ಟಿದ್ದಾಳೆ ಅವನ ದುರಾಸೆಗಲ್ಲ" ಇದು ಮೊದಲು ವಿವರಿಸಿರುವ "ಪ್ರಾಣಿಪಕ್ಷಿಗಳ ಜತೆ ನಾವೂ ಒಂದಾಗಿರೋಣ" ಎಂಬ ಭಾವನೆಗೆ ಇಂಬು ಕೊಡುತ್ತದೆ. ಹಾಗೆಯೇ ದುರಾಸೆಪಡದೆ ಗೆಣಸಿನ ಹಂಬುಗಳು ಕೆಲವನ್ನು ಬಿಟ್ಟಿದ್ದರೆ ಮುಂದೆ ಅದೇ ಜನರಿಗೇ ಹತ್ತು ಪಟ್ಟು ನೂರು ಪಟ್ಟು ಗೆಣಸನ್ನು ಕೊಡುವಂತೆ ಪ್ರಕೃತಿ ಎಲ್ಲವನ್ನೂ ಕೊಡುತ್ತಾಳೆ.

ಇಂದು ಸ್ವರ್ಧಾತ್ಮಕ ಪ್ರಪಂಚದಲ್ಲಿ ನಾವು ಬದುಕುತ್ತಿದ್ದೇವೆ. ಇಲ್ಲಿ ಮಾಂಸಖಂಡಗಳ ಬಲ, ಕುಯುಕ್ತಿಯ ಬಲಗಳೇ ಮೇಲುಗೈ ಪಡೆದಿರುವಂತೆ ಕಾಣುತ್ತದೆ. ಹಾಗೆಯೇ ಜಗತ್ತಿನಲ್ಲಿ ಭೀತಿಯು ಆವರಿಸಿದೆ. ಇದು ವಿಕೃತಿಯೆಡೆಗೆ ಹೊರಟಿರುವ ನಾಗರಿಕತೆಯ ಕೊಡುಗೆ. ಈ ಲೇಖಕರ ಅನುಭವದಲ್ಲಿ ಇಪ್ಪತ್ತೈದು ವರ್ಷಗಳಲ್ಲಿ ಒಂದು ದಿನವಾದರೂ ಒಂದು ಪೋಡಿನ ಜನರು ಗುಂಪು ಕಟ್ಟಿಕೊಂಡು ಮತ್ತೊಂದು ಪೋಡಿನ ಮೇಲೆ ದಂಡೆತ್ತಿ ಹೋಗಲಿಲ್ಲ. ಅಥವಾ ಅಲ್ಲಲ್ಲಿ ಗ್ಯಾಂಗ್ ಮಾಡಿಕೊಂಡು ವರ್ತಿಸಲಿಲ್ಲ. ಕೊಲೆ ಸುಲಿಗೆ ಅಥವಾ ಹಿಂಸೆ ಮಾಡಲಿಲ್ಲ. ಇಷ್ಟೇ ಅಲ್ಲ, ನಮ್ಮಿಂದ ವೈದ್ಯೆಯರಾಗಿ, ಸಮಾಜ ಕಾರ್ಯಕರ್ತೆಯರಾಗಿ ಉಪಾಧ್ಯಾಯಿನಿಯರಾಗಿ ಹೋದ ಹೆಣ್ಣುಮಕ್ಕಳನ್ನು ಕೂದಲು ಕೊಂಕದಂತೆ ನೋಡಿಕೊಂಡರು ಈ ಸಹೃದಯಿ ಜನಗಳು. ಜನರು ಬಡವರಾದರೂ ಅವರದೇ ರೀತಿನೀತಿ. ನಯ ನಾಜೋಕಿನಲ್ಲಿ ಒಮ್ಮೆ ಸೊಮ್ಮಾಗ್ಗಿ ಬಾಳುತ್ತಾ, ಬಂದ ಜನರನ್ನೂ ಅಣ್ಣಾ, ಅಕ್ಕ ಎಂದು ಕರೆದು ಗೌರವ ಕೊಡುತ್ತಾ ನಿಜವಾಗಿ ಸಂಭಾವಿತ ಜನರಾದರು. ಗುಡಿಸಲಿಗೆ ಯಾರಾದರೂ ಬಂದರೆ 'ಮಂದಲಿಗೆ (ಚಾಪೆ) ಹಾಸು' ಎಂದು ಹಾಸುವರು. ಎಲೆಯಲ್ಲಿ ಸ್ವಲ್ಪ ಜೇನನ್ನು ಕೊಡುವರು. ತಮ್ಮಲ್ಲಿ ಉಂಟಾಗುವ ಸಮಸ್ಯೆಗಳನ್ನು ತಮ್ಮದೇ ಆದ 'ನ್ಯಾಯ'ದಿಂದ ಪರಿಹರಿಸಿಕೊಳ್ಳುವರೆ ವಿನಾ ಘರ್ಷಣೆಗಿಳಿಯುವುದಿಲ್ಲ. ಇದರಲ್ಲಿ



ತೋರುವ ಸಹನೆ ಜಾಣ್ಮೆಯೂ ಮೆಚ್ಚಬೇಕಾದ್ದೆ. ಆರ್ಥಿಕವಾಗಿಯೂ ಇದು ಹೊರೆಯಾಗದು.

ಸರಳತೆಯೇ ಮೂರ್ತಿವೆತ್ತಂತಹ ಜೀವನ ಆದಿವಾಸಿಗಳದು. ಒಂದು ಚಿಕ್ಕ ಗುಡಿಸಲು, ನಾಲ್ಕಾರು ಮಡಿಕೆ ಕುಡಿಕೆಗಳು. ಒಂದೆರಡು ಬಟ್ಟೆ ಇಷ್ಟೇ ಅವರ ಆಸ್ತಿ. ಮನೆಗೆ ಬೀಗ ಹಾಕುವ ಗೋಜಿಲ್ಲ, ಆವಶ್ಯಕತೆಯೂ ಇಲ್ಲ. ದಾಸ್ತಾನು ಮಾಡುವುದು, ಅಪಾರ ವಸ್ತುಗಳನ್ನಾಗಲಿ ಬೆಲೆ ಬಾಳುವ ವಸ್ತುಗಳನ್ನಾಗಿ ಹೊಂದುವ ಪ್ರಶ್ನೆಯೇ ಇಲ್ಲ. ಅದರಲ್ಲಿ ಆಸೆಯೂ ಇಲ್ಲವೆನ್ನಿ. ಗೋರೂಕಾನ ಹಾಡುಕೆಗಳಲ್ಲಿ, ಕಗ್ಗ ಓಲಗದಲ್ಲಿ, ಕಥೆ ಕಾರಣಗಳಲ್ಲಿ ತೃಪ್ತರು ಆದಿವಾಸಿಗಳು. ಇದು ಕಲಾತ್ಮಕ ಮನರಂಜನೆ. ಹೂಗಳ ಮೇಲೆಯೇ ಒಂದು ಹಾಡು, ಮರಗಳ ಬಗ್ಗೆಯೇ ಗೀತೆ, ಭೂಮಿ ಹುಟ್ಟಿದ್ದೇ ಕತೆ, ರಾಖಾಸಿ (ರಾಕ್ಷಸಿ) ಕತೆ ಹೀಗೆ ವಿಧವಿಧ ಜಾನಪದ ಸಂಪತ್ತು ಸೋಲಿಗರಲ್ಲಿದೆ. ಸೋಲಿಗ ಸಂಪ್ರದಾಯಗಳಾದ ನ್ಯಾಯ ಪಂಚಾಯಿತಿ, ಪ್ರೇಮ ವಿವಾಹ, ಸಮುದಾಯ ಜೀವನದ ಮೂಲಕ ದಿಕ್ಕಿಲ್ಲದ ಮಕ್ಕಳ ರಕ್ಷಣೆ ಮತ್ತು ವೃದ್ಧರ ಮೇಲೆ ಗಮನ ಗೌರವ ಇವೆಲ್ಲವೂ ಇಂದಿಗೂ ಸುಸಂಬದ್ಧವಾಗಿಯೇ ಇವೆ. ವೃತ್ತಿ ಪರಿಣಿತರಾದ ಕೆಲವೇ ವಿಶೇಷ ಜನರ ಬದಲಾಗಿ ಎಲ್ಲರೂ ಸಾಕಷ್ಟು ಪರಿಣಿತರಾಗಿರುವುದು ಒಂದು ವಿಧದಲ್ಲಿ ನಷ್ಟವೆನಿಸಿದರೂ, ಸರಳ ಸಮುದಾಯಗಳಿಗೆ ಸಾಧ್ಯ ಮತ್ತು ಸೂಕ್ತವೆಂದೆನಿಸುತ್ತದೆ. ಹಾಡಿನಲ್ಲಿ, ಪೂಜೆಗಳಲ್ಲಿ, ನಾರುಬೇರು ಔಷಧಿ ಕೊಡುವುದರಲ್ಲಿ ಎಲ್ಲರಿಗೂ ಸಾಕಷ್ಟು ಪರಿಜ್ಞಾನವಿರುತ್ತದೆ. ಒಂದು ವಿಧದಲ್ಲಿ ಇದು ಶೋಷಣೆಯನ್ನು ತಪ್ಪಿಸುತ್ತದೆ.

## ಆದಿವಾಸಿ ಆತ್ಮಪ್ರತ್ಯಯ

ಗಿರಿಜನರು ಬಡವರಾಗಿದ್ದಿರಬಹುದು. ಆದರೆ ಜನಾಂಗವು ಹೆಮ್ಮೆಯನ್ನು ತಾಳಿ ತಲೆಯೆತ್ತಿ ನಿಂತಿರುವುದು. ಆದ್ದರಿಂದಲೇ ಬಹುಶಃ

ಆಂಗ್ಲೇಯರು ಸಹ ಅವರನ್ನು ಬಗ್ಗಿಸಲಾಗಲಿಲ್ಲ. ಅನೇಕ ಆದಿವಾಸಿ ದಂಗೆಗಳೇ ಇದಕ್ಕೆ ಸಾಕ್ಷಿ. ದಕ್ಷಿಣ ಭಾರತದಲ್ಲಿ ಈ ರೀತಿಯ ಪರಿಸ್ಥಿತಿಯಾಗದಿದ್ದರೂ ಆದಿವಾಸಿಗಳು ಆತ್ಮಪ್ರತ್ಯಯವುಳ್ಳವರಾಗಿಯೇ ಇರುವುದೆಂಬುದು ಸತ್ಯ. ದಾಸ್ಯಭಾವವೆಂಬುದು ಅವರಲ್ಲಿ ಇರಲಿಲ್ಲ. ಈಗ ಅದರ ಕುರುಹುಗಳೇನಾದರೂ ಕಂಡು ಬಂದರೆ ಅದಕ್ಕೆ ಕಾರಣ ಅವರ ಮೇಲಿನ ಮಿತಿಮೀರಿದ ಆಡಳಿತ, ಅಜ್ಞಾನದ ದುರುಪಯೋಗ ಮತ್ತು ನಾಗರಿಕತೆಯ ಕೊಡುಗೆ.

ಗಿರಿಜನರೊಬ್ಬರಿಂದ ಈ ಲೇಖಕನು ಕೇಳಿದ ಕಥೆ ಇದು. ಪೂರ್ವಕಾಲದಲ್ಲಿ ಒಮ್ಮೆ ಮೈಸೂರು ಮಹಾರಾಜರು ಬಿಳಿಗಿರಿರಂಗನ ಬೆಟ್ಟಕ್ಕೆ ಬಂದರು. ಅವರನ್ನು ಎದುರುಗೊಂಡು ಹಣ್ಣು ಜೇನುಗಳಿಂದ ಸತ್ಕರಿಸಿದ ಆದಿವಾಸಿ ಜನಗಳ ಬಗ್ಗೆ ಪ್ರೀತಿ ತಾಳಿದರು. ತಮ್ಮ ರೇಷ್ಮೆ ನಿಲುವಂಗಿಯ ಎರಡೂ ಜೇಬುಗಳಿಂದ ಎರಡು ಮುಷ್ಟಿ ಹೊನ್ನಿನ ನಾಣ್ಯಗಳನ್ನು ತೆಗೆದರು; "ಬನ್ನಿರಯ್ಯಾ ಇದನ್ನು ತೆಗೆದುಕೊಳ್ಳಿ" ಎಂದು ಎರಡೂ ಕೈಗಳನ್ನು ಮುಂದೆ ಚಾಚಿದರು. ಆಗ ಸೋಲಿಗರ ಯಜಮಾನರು ಹೇಳಿದ್ದೇನೆಂದರೆ, "ಸ್ವಾಮಿ, ನಮಗೆ ಹೊನ್ನು ಬೇಡ, ನಿಮ್ಮ ಪ್ರೀತಿ ವಿಶ್ವಾಸವಿದ್ದರೆ ಸಾಕು" ಎಂದು ನಿರಾಕರಿಸಿದರು. ಮಹಾರಾಜರು ಅವರನ್ನು ಮೆಚ್ಚಿ ಹೊನ್ನಿನ ನಾಣ್ಯಗಳನ್ನು ಮತ್ತೆ ಜೇಬಿನಲ್ಲಿಯೇ ಹಾಕಿಕೊಂಡುಬಿಟ್ಟರು. "ನೋಡಿ ಸ್ವಾಮೀ, ಅಂದಿನಿಂದ ನಾವೂ ಮತ್ತೂ ಬಡವರಾಗಿಯೇ ಇದ್ದೀವಿ; ನಮ್ಮವರು ಹಾಗೆ ಮಾಡಬಾರದಿತ್ತು" ಎಂದು ನಮ್ಮ ಕತೆಗಾರ ತನ್ನ ಒಕ್ಕಣೆ ಸೇರಿಸಿದರು.

ಈ ಲೇಖಕನಿಗೆ ಅನ್ನಿಸಿದ್ದೇನೆಂದರೆ "ಎಂತಹ ಆತ್ಮಗೌರವ! ಮಹಾರಾಜರೇ ಕೊಟ್ಟರೂ ನಮ್ರವಾಗಿ ಖಂಡಿತವಾಗಿ ನಿರಾಕರಿಸಲು ಎಂತಹ ತ್ಯಾಗ, ನಿರಾಸಕ್ತಿ ಮತ್ತು ಆತ್ಮವಿಶ್ವಾಸ ಎಂದು ಹೆಮ್ಮೆಯಾಯಿತು. ಆ ಮೆಚ್ಚುಗೆಯನ್ನು ಸೋಲಿಗರಿಗೆ ಹೇಳದೆ ಇರಲಾಗಲಿಲ್ಲ "ಹೌದು. ನಿಮ್ಮ



ಹಿರಿಯರು ಮಾಡಿದ್ದೇ ಸರಿ ಅದು ಎಂತಹ ಸುಸ್ವಾಭಿಮಾನ!" ಈ ಮಾತಿಗೆ ಸೋಲಿಗರೂ ತಲೆದೂಗಿದರು.

ಇದು ಆದಿವಾಸಿ ಸಂಸ್ಕೃತಿಗಳ ಕೆಲವಂಶಗಳು ಮಾತ್ರ. ಆದ್ದರಿಂದಲೇ ಈ ಸಮುದಾಯಗಳು ಅತಿ ರಕ್ತದೊತ್ತಡ, ಮಧುಮೇಹ, ನರರೋಗಗಳನ್ನು ದೂರವಿಟ್ಟಿತೆಂಬುದು ಗಮನಿಸಬೇಕಾದ ಅಂಶ. ಅಂತೆಯೇ ಬಡತನವಿದ್ದರೂ ಶಾಂತಿ ಸಹಬಾಳ್ವೆಗೆ ಅದೊಂದು ಅಡ್ಡಿಯಲ್ಲ ಎಂಬುದನ್ನು ತಮ್ಮ ಜೀವನದಿಂದಲೇ ತೋರಿಸಿಕೊಟ್ಟಿದ್ದಾರೆ. ಮುಖ್ಯವಾಗಿ ಶಾಂತಿಯುತ ಸಮಾಜವೊಂದನ್ನು ಅವರು ಕಟ್ಟಿಕೊಂಡು ಬಾಳಿದರೆಂಬುದು ಇಂದಿನ ವಿಶ್ವವೇಕೆ ಹಾಗೆಯೇ ಬಾಳಬಾರದೆಂಬ ಹಂಬಲ ಮೂಡಿಸುತ್ತದೆ.

### ಉಪ ಸಂಸ್ಕೃತಿಗಳು

ಈ ಸುಂದರ ಕಿರು ಸಂಸ್ಕೃತಿಗಳನ್ನು ಒಮ್ಮೊಮ್ಮೆ 'ಉಪ ಸಂಸ್ಕೃತಿ'ಗಳೆಂದು ಕರೆಯಲಾಗುತ್ತಿದೆ. ಇದರ ಸಾಮಾಜಿಕ, ಭೌಗೋಳಿಕ ಇನ್ನಿತರ ಹಿನ್ನೆಲೆಯಲ್ಲಿ ಅಸ್ತಿತ್ವದಲ್ಲಿರುವ ದೊಡ್ಡ ಸಂಸ್ಕೃತಿಯು 'ಪ್ರಧಾನ ಸಂಸ್ಕೃತಿ'ಯೆಂದು ಕರೆಸಿಕೊಳ್ಳಲ್ಪಡುತ್ತಿದೆ. ಇದರ ಪ್ರಭಾವ ಸಾಮಾನ್ಯವಾಗಿ ಹೆಚ್ಚಾಗಿದ್ದು ಇದು ಪರಿಣಾಮಗಳನ್ನುಂಟುಮಾಡಬಲ್ಲ ಶಕ್ತಿಯನ್ನು ಹೊಂದಿರುವುದು ಎಲ್ಲರ ಅನುಭವ. 'ಉಪಸಂಸ್ಕೃತಿ' ಎಂಬ ಪದವು ಸ್ವಲ್ಪ ಮಟ್ಟಿಗೆ ಸರಿಯೆನಿಸಿದರೂ ಅದು ಪ್ರಧಾನ ಸಂಸ್ಕೃತಿಗೆ ಗೌಣವಾಗುವ, ಒಮ್ಮೊಮ್ಮೆ ಪೂರಕವಾಗುವ, ತಾನೇ ಹೊಂದಿಕೊಳ್ಳಲಿ ಎಂಬ ಆಶಯವಿರುವ, ಪ್ರಧಾನ ಸಂಸ್ಕೃತಿಯ ಮೇಲೆ ಅವಲಂಬಿತವಾಗಿದೆಯೆಂಬ ಅರ್ಥಗಳ ಸಾಧ್ಯತೆಯಿರುತ್ತದೆ. ಈ ಆದಿವಾಸಿ ಸಂಸ್ಕೃತಿಗಳನ್ನು 'ಮೂಲ ಸಂಸ್ಕೃತಿ'ಗಳೆಂದು ಕರೆಯುವುದು ಹೆಚ್ಚು ಸೂಕ್ತ ಎನಿಸುತ್ತದೆ. ಸಮಸಂಸ್ಕೃತಿ ಎಂಬುದೂ ಸಹ ಅಷ್ಟು ಹೊಂದಾಣಿಕೆಯಾಗಿ ಕಾಣುವುದಿಲ್ಲ. ಆದರೆ ಬಳಕೆಯಲ್ಲಿ ಬಂದಿದ್ದು ಜನರಿಂದ ಸ್ವೀಕೃತವಾದಂತಿರುವುದರಿಂದ ಉಪ ಸಂಸ್ಕೃತಿ ಎಂಬುದಾಗಿಯೆ ಇಂದು ಉಪಯೋಗವಾಗುತ್ತಿದೆ.

## ಪ್ರಧಾನ ಸಂಸ್ಕೃತಿ ಹೇಗಿರಬೇಕು?

ಪ್ರಧಾನ ಸಂಸ್ಕೃತಿಯು ನಿಜವಾಗಿಯೂ ಮಹತ್ತ್ವದ ಸಂಸ್ಕೃತಿಯಾಗಿ ಎಲ್ಲ ಸಂಸ್ಕೃತಿಗಳ ಸಾರಸರ್ವಸ್ವವಾಗಿ ಜನರಲ್ಲಿ ಸದ್ಭಾವನೆ ಬೆಳೆಸುತ್ತಾ ಪ್ರೇಮ ಸತ್ಯ ಸರಳಜೀವನದ ಕಡೆ ಕೊಂಡೊಯ್ಯುವುದಾದರೆ ಅದು ನಿಜ ವಾಗಿಯೂ 'ಪ್ರಧಾನ'ವೆಂದು ಕರೆಸಿಕೊಳ್ಳಲು ಅರ್ಹವಾಗಿರುತ್ತದೆ. ಆದರೆ ಇಂದೇನಾಗಿದೆ? ಪ್ರಧಾನ ಸಂಸ್ಕೃತಿಗಳಿಗೆ (ಅ) ನಾಗರಿಕತೆಯ ಬಿರುಗಾಳಿ ಬೀಸಿ ಸ್ವಾರ್ಥದ ಸಿರಿವಂತಿಕೆಯ ವಾಣಿಜ್ಯಕರಣ ಮತ್ತು ಬಹುವಸ್ತು ಉಪಯೋಗಿ ಮನೋಭಾವದ, ಸಂವೇದನಾ ಸೂಕ್ಷ್ಮತಾ ರಹಿತ ಭಾವನೆ ಗಳ, ಪ್ರತಿಯೊಂದನ್ನು ಭೌತಿಕ ಲಾಭಗಳಿಂದ ಅಳೆಯುವ ಮನೋಭಾವ ಅಲ್ಲಿ ಬೇರೂರಿದೆ. ಇನ್ನೂ ಅನೇಕ ಕ್ಲಿಷ್ಟ ಭಾವನೆಗಳು ಒಡಗೂಡಿ ಕೆಲವೇ ಜನರ ಪಂಗಡಗಳ ಸಮುದಾಯಗಳ ಸಂಸ್ಕೃತಿಯೇ ಪ್ರಧಾನವೆಂದು ಕರೆಸಿ ಕೊಳ್ಳಲ್ಪಡುತ್ತದೆ. ಹಿಂದೆ ತಿಳಿಸಿದಂತೆ ಇದನ್ನು ಮುದ್ರಣ ಮತ್ತು ಇಲೆಕ್ಟ್ರಾನಿಕ್ ಮಾಧ್ಯಮಗಳೂ ಹಾಗೆಯೇ ಗುರುತಿಸುತ್ತಿರುವುದು ಇನ್ನೂ ದುಃಸ್ಥಿತಿಗೆ ಕಾರಣವಾಗಿದೆ. ಇಂತಹ ಸಂದರ್ಭದಲ್ಲಿ ನಾವು ಇವುಗಳನ್ನು ಪೆಡಂಭೂತ ಸಂಸ್ಕೃತಿಗಳೆಂದು ಕರೆಯಬಹುದೇನೋ! ಆದ್ದರಿಂದ ಮುಖ್ಯ ವಾಹಿನಿಯಲ್ಲಿ ಸೇರುವ ಉಪಸಂಸ್ಕೃತಿಗಳಿಗೆ ಅದರ ಇರುವಿಕೆ ಉಳಿಯುವು ದಾದರೆ. ಅದರ ಸೊಗಡು ಸೊಬಗೂ ಪ್ರಧಾನ ಸಂಸ್ಕೃತಿಗೆ ಬಂದು. ಅದು ಪೆಡಂಭೂತವಾಗಲಾರದು. ಬದಲಿಗೆ ಸಾಕಷ್ಟು ಸುಂದರ ಉಪಸಂಸ್ಕೃತಿಗಳ ಪ್ರಭಾವದಲ್ಲಿ. ಜನರ ಪ್ರೇಮಯುತ ಸ್ವೀಕಾರದಲ್ಲಿ ಮುಖ್ಯವಾಹಿನಿಯು ನಿಜವಾಗಿಯೂ ಸುಂದರ ಸಂಸ್ಕೃತಿಯಾಗುವುದು. ಹೂಮಾಲೆಯಲ್ಲಿ ಅನೇಕ ಬಣ್ಣದ ಹೂಗಳು ಕಂಗೊಳಿಸುವಂತೆ.

ಹಾಗೆ ನೋಡಿದರೆ ಪ್ರಧಾನ ಸಂಸ್ಕೃತಿಯೊಂದು ಅಸ್ತಿತ್ವದಲ್ಲಿ ಇದೆ ಯೆಂದು ಹೇಳಲು ಕಷ್ಟವಾಗುತ್ತದೆ. ಪ್ರತಿಯೊಬ್ಬರೂ ತಮ್ಮದೇ ಪುಟ್ಟ



ಸುಂದರ ಸಂಸ್ಕೃತಿಗಳನ್ನು ಬಿಡಲಾರರು; ಅವು ಖಂಡಿತ ಚಿರಕಾಲವಿರಲಿ! ಪ್ರಧಾನ ಸಂಸ್ಕೃತಿಯು ಯಾವುದನ್ನೂ ಕಿರಿದೆಂದು ಅಲಕ್ಷಿಸದೆ ಅಮೂಲ್ಯ ವೆಂದು ಅರಿತು ಸ್ವಲ್ಪವೂ ಕೆಡಿಸದೆ ಸ್ವೀಕರಿಸುವ ಭಾವನೆ ಬೆಳೆದಾಗ ಮಾತ್ರ ಅದರ ಉಳಿವು. ಆದ್ದರಿಂದ ಜನರು ಇಂದು ತಮ್ಮ ಆಯ್ಕೆಯನ್ನು ಮಾಡ ಬೇಕಾಗಿದೆ. ಮುಖ್ಯವಾಹಿನಿಯಲ್ಲಿ ಈಜುತ್ತಾ ಎಲ್ಲವನ್ನು ರಕ್ಷಿಸಿಕೊಳ್ಳಬೇಕೋ ಅಥವಾ ತೇಲಿಸಿ ಕೊಚ್ಚಿ ಹಾಕಬೇಕೋ ಎಂಬುದೇ ಆ ಆಯ್ಕೆ. ಇದಕ್ಕೆ ಎರಡೂ ಕಡೆಗಳಿಂದ ಪ್ರಯತ್ನವಾಗಬೇಕಾಗಿದೆ. ಮುಖ್ಯವಾಹಿನಿಯ ದೊಡ್ಡ ಸಮುದಾಯವು ಸ್ವೀಕಾರ ಮತ್ತು ಗೌರವ ಮನೋಭಾವನೆಯನ್ನೂ ಉಪ ಸಂಸ್ಕೃತಿಗಳು ಕೊಡುಗೆಯ ಮತ್ತು ಪ್ರಧಾನ ಸಂಸ್ಕೃತಿಯನ್ನು ಇನ್ನೂ ಶ್ರೀಮಂತವಾಗಿಸುವ ಮನೋಭಾವನೆಯನ್ನೂ ಪಡೆಯಬೇಕಾಗುತ್ತದೆ. ಇಲ್ಲದಿದ್ದರೆ ಇಬ್ಬಗೆಯ ನಷ್ಟವಾಗಿ (ಅ) ನಾಗರಿಕತೆಯಿಂದ ವಿಜೃಂಭಿತವಾದ 'ಪೆಡಂಭೂತ ಸಂಸ್ಕೃತಿ'ಯೊಂದೇ ಉಳಿಯುತ್ತದೆ.

## ವಿಶ್ವಶಾಂತಿಗೆ ದಾರಿದೀಪ

ಈ ತೂಗುಕತ್ತಿಯು ಹೀಗೆ ತಲೆಯ ಮೇಲೆ ಬೀಳಲು ಸನ್ನದ್ಧವಾಗಿ ಓಲಾಡುತ್ತಿರಬೇಕಾದರೆ ಜಗತ್ತು ಸುಮ್ಮನೆ ಕುಳಿತಿರುವುದೆಂತು? ಕಹಿ ಘರ್ಷಣೆಗಳ, ಯುದ್ಧಗಳ, ಆಡಂಬರದ ಪೊಳ್ಳು ಸುಖಸಾಧನಗಳ ಜೀವನವು ವಿಶ್ವಶಾಂತಿಗೆ ಖಂಡಿತ ಪರಿಹಾರ ಮಾರ್ಗವಾಗಲಾರದು. ಅದಕ್ಕೆ ಸತ್ಯ ಸೌಂದರ್ಯದ ಭದ್ರ ಶಿಲಾಸನದ ಮೇಲೆ ಮಂಡಿತವಾದ ಪ್ರೇಮಮಯ ಜೀವನ, ಆಳವಾದ ಅರಿವು, ಪರಸ್ಪರ ನಂಬಿಕೆ ಗೌರವ ಗಳು, ಎಷ್ಟು ಕಡಿಮೆಯೋ ಅಷ್ಟೇ ಸಾಧನಗಳಲ್ಲಿ ಬಾಳುವ ಸರಳ ಜೀವನ, ಹಸಿರು ಪರಿಸರದೊಡನೆ ಸಹ ಬಾಳ್ವೆ, ಜೀವ ವೈವಿಧ್ಯತೆ ಸಂರಕ್ಷಣಾ ಕಳಕಳಿ, ಪ್ರಕೃತಿಯ ಕಣಕಣದೊಡನೆಯೂ ಸ್ಪಂದನ ಮುಂತಾದ ಭಾವನೆ ಭರವಸೆಗಳನ್ನು ಹೊಂದಿರುವ ಸದಾಶಯ ಜೀವನ ಬೇಕಾಗಿರುವುದು. ವನ

ಸಂಸ್ಕೃತಿಯೇ ಅಂತಹ ಜೀವನದ ಧ್ರುವತಾರೆ. ಯಾವ ಸಂಸ್ಕೃತಿಗಳು ಹಂಚಿಕೊಂಡು ಬಾಳಿದರೋ ಅತ್ಯಲ್ಪ ಸಾಧನಗಳಲ್ಲಿ ಜೀವಿಸಿದರೋ, ಎಂದೂ ಏನನ್ನೂ ಕೂಡಿಡಲಿಲ್ಲವೋ, ನಿನ್ನೆಯ ನೀರನ್ನು ಸಹ ಚೆಲ್ಲಿ ಬಿಟ್ಟರೋ, ಹಳ್ಳಿಹಳ್ಳಿಗಳಲ್ಲಿ ಬೀದಿಬೀದಿಗಳಲ್ಲಿ ಹೋರಾಟ ಮಾಡ ಲಿಲ್ಲವೋ, ಎಲ್ಲ ಮಕ್ಕಳನ್ನೂ ಒಂದೇ ಬಗೆಯಾಗಿ ಆದರಿಸಿ ಸಾಕಿದರೋ ಸರಳ ನ್ಯಾಯದಿಂದ ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಂಡರೋ, ಇನ್ನೂ ಹತ್ತು ಹಲವಾರು ವಿಧಗಳಲ್ಲಿ ಇಂದಿನ 'ನಾಗರಿಕ' ಅವಾಂತರಗಳಿಂದ ಸಾಕಷ್ಟು ದೂರವಾಗಿದ್ದಾರೆಯೊ ಅಂತಹ ಆದಿವಾಸಿ ವನಸಂಸ್ಕೃತಿಯೇ ವಿಶ್ವಶಾಂತಿಗೆ ದಾರಿದೀಪವಾಗಬಲ್ಲದು. ಹಾಗಾದರೆ ವೈಜ್ಞಾನಿಕ ಮುನ್ನಡೆಯ ಸ್ಥಾನವೇನು? ಸಂಸ್ಕೃತಿ ಲೇಪನದ ವಿಜ್ಞಾನವು ಮನುಷ್ಯನನ್ನು ಘಾಸಿ ಗೊಳಿಸದು. ಅದನ್ನೂ ಸೂಕ್ತರೀತಿಯಲ್ಲಿ ಸ್ವೀಕರಿಸಿ ಮಾನವ ಮೌಲ್ಯಗಳ ಪ್ರಕಾಶನಕ್ಕೆ, ವಿಶ್ವಶಾಂತಿಗೆ ಶ್ರಮಿಸುವುದೇ ಇಂದಿನ ನಮ್ಮೆಲ್ಲರ ಕರ್ತವ್ಯ.